# ಅಗ್ನಿಮುಖ ಪ್ರಯೋಗ

(ಯಜುರ್ವೇದ ಹಾಗೂ ಋಗ್ವೇದ ರೀತ್ಯಾ)

ಮಾರ್ಗದರ್ಶಕರು

ವೇ. ಬ್ರ. ಶ್ರೀ ಅನಂತಕೃಷ್ಣಶರ್ಮರು
ಯಜುರ್ವೇದ ಘನಪಾಠಿಗಳು

ಮತ್ತು

ವೇ. ಬ್ರ. ಶ್ರೀ ಗುಂಡಭಟ್ಟರು
ಋಗ್ವೇದ ಘನಪಾಠಿಗಳು

ಸಂಗ್ರಾಹಕರು
ಸ. ಶ್ರೀನಿವಾಸ

ಪ್ರಕಾಶಕರು

ಶ್ರೀ ಗುರು ಸಂಕಣ್ಣಾರ್ಯಾಶ್ರಮ
(ಶ್ರೀ ದತ್ತಾತ್ರೇಯ ದೇವಸ್ಥಾನ)
ನಂ. 59, 3ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು- 560 028.

| | | |
|---|---|---|
| ಅಗ್ನಿ ಮುಖ ಪ್ರಯೋಗ | - | ಕನ್ನಡ ಭಾಷೆಯಲ್ಲಿ ಋಗ್ವೇದ ಹಾಗೂ ಯಜುರ್ವೇದ ಮಂತ್ರಗಳಿಂದ ಸಂಗ್ರಹಿಸಿ ಬರೆದಂತಹ ಪ್ರಯೋಗ ಗ್ರಂಥ |
| ಪ್ರಕಾಶಕರು | - | ಶ್ರೀ ಗುರು ಸಂಕಣ್ಣಾರ್ಯಾಶ್ರಮ ಟ್ರಸ್ಟ್<br>(ಶ್ರೀ ದತ್ತಾತ್ರೇಯ ದೇವಸ್ಥಾನ)<br>ನಂ. 59, 3ನೇ ಬ್ಲಾಕ್, ತ್ಯಾಗರಾಜನಗರ,<br>ಬೆಂಗಳೂರು - 560 028.<br>ದೂರವಾಣಿ : 6769210 |
| ಎರಡನೆ ಮುದ್ರಣ | - | 1000 ಪ್ರತಿಗಳು - 10-11-2002 |
| ಮೊದಲನೆ ಮುದ್ರಣ | - | 1000 ಪ್ರತಿಗಳು - 01-09-2000 |
| ಬೆಲೆ | - | ರೂ. 80-00 (ರೂ. ಎಂಬತ್ತು ಮಾತ್ರ) |
| ಮುದ್ರಕರು | - | ಶ್ರೀ ಗಣೇಶ ಮಾರುತಿ ಪ್ರಿಂಟರ್ಸ್<br>ನಂ. 76/59, 3ನೇ ಬ್ಲಾಕ್, 6ನೇ ಮುಖ್ಯರಸ್ತೆ<br>ತ್ಯಾಗರಾಜನಗರ, ಬೆಂಗಳೂರು - 560 028<br>ದೂರವಾಣಿ : 6766342. |

ಶ್ರೀ ಗುರುಭ್ಯೋ ನಮಃ

# ಪ್ರಕಾಶಕರ ನುಡಿ

ಅಗ್ನಿ ಮುಖ ಪ್ರಯೋಗ ಪುಸ್ತಕವನ್ನು ನಮ್ಮ ವೇದಾಧ್ಯಯನದ ಗುರುಗಳಾದ ವೇ॥ಬ್ರ॥ಶ್ರೀ ಶ್ರೀನಿವಾಸರವರು ತಮ್ಮ ಸತತ ಪ್ರಯತ್ನ ಮತ್ತು ಪರಿಶ್ರಮದಿಂದಾಗಿ ಸಂಗ್ರಹಿಸಿದ್ದಾರೆ.

ಸಕ್ರಮವಾಗಿ ಹೋಮಾದಿಗಳನ್ನು ಗೃಹಸ್ಥರು ನಡೆಸಲು ಸೂಕ್ತ ಪುರೋಹಿತರ ಕೊರತೆ ಈಗಿನ ಕಾಲದಲ್ಲಿ ಕಂಡು ಬರುತ್ತದೆ. ಅಂತಹ ಕಾಲದಲ್ಲಿ ವೇದಾಧ್ಯಯನ ಮಾಡಿದ ಗೃಹಸ್ಥರು ಸ್ವತಃ ತಮ್ಮ ಮಿತ್ರರ ಸಹಾಯದಿಂದ ಹೋಮಾದಿಗಳನ್ನು ನಡೆಸಲು ಈ ಪುಸ್ತಕ ಬಹು ಅನುಕೂಲಕರವಾಗಿದೆ ಹಾಗೂ ವೃತ್ತಿ ನಿರತರಿಗೂ ಸಹಾಯಕವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.

ವೇ॥ಬ್ರ॥ಶ್ರೀ॥ ಶ್ರೀನಿವಾಸರವರು ವೃತ್ತಿಯಲ್ಲಿ ನಿವೃತ್ತಿ ಹಣಕಾಸಿನ ಅಧಿಕಾರಿಯಾದರೂ ಹಿರಿಯರ ಸಂಸ್ಕಾರದಿಂದ ವೇದಾಧ್ಯಯನ ಮಾಡಿರುತ್ತಾರೆ. ಅವರು ಈಗ ಸುಮಾರು 11 ವರ್ಷಗಳಿಂದ ತ್ಯಾಗರಾಜನಗರದ ಸಾಯಿಬಾಬಾ ಮಂದಿರ, ಶ್ರೀ ದತ್ತಾತ್ರೇಯ ದೇವಸ್ಥಾನ .ಮತ್ತು ಜಯನಗರ 3ನೇ ಬ್ಲಾಕ್ ಎಲ್.ಐ.ಸಿ. ಕಾಲೋನಿಯಲ್ಲೂ ಸಹ ವೇದಾಧ್ಯಯನ ತರಗತಿಗಳನ್ನು ನಡೆಸುತ್ತಿದ್ದಾರೆ. ಇದುವರೆಗೆ ಅವರಿಂದ 100ಕ್ಕೂ ಮೀರಿ ಶಿಷ್ಯರು ಅಧ್ಯಯನ ಮಾಡಿ, ಅನೇಕರು ಸ್ವತಃ ತಾವೇ ಹೋಮಾದಿಗಳನ್ನು ಮಾಡಿಸುವ ಪರಿಣತಿಯನ್ನು ಹೊಂದಿದ್ದಾರೆ.

ಈ ರೀತಿಯಾದ ಅಗ್ನಮುಖ ಪ್ರಯೋಗ ಪುಸ್ತಕವು ಕನ್ನಡ ಭಾಷೆಯಲ್ಲಿ ಬರುತ್ತಿರುವುದು ಬಹುಶಃ ಇದೇ ಪ್ರಥಮವೆಂದರೆ ಅತಿಶಯೋಕ್ತಿಯಾಗಲಾರದು. **ಈ ಪುಸ್ತಕದಲ್ಲಿ ಅಗ್ನಿಮುಖ ಪ್ರಯೋಗದೊಂದಿಗೆ ಪುಣ್ಯಾಹ ಪ್ರಯೋಗಗಳನ್ನೂ ಸಹ ಕೊಡಲಾಗಿದೆ.** ಆಸ್ತಿಕ ಮಹಾಜನರು ಈ ಪುಸ್ತಕದ ಪೂರ್ಣ ಪ್ರಯೋಜನ ಪಡೆದು ಸಂಗ್ರಾಹಕರ ಶ್ರಮ ಸಾರ್ಥಕ ಪಡಿಸಬೇಕಾಗಿ ಕೋರುತ್ತೇವೆ.

ಈ ಪುಸ್ತಕಕ್ಕೆ ವೇ॥ಬ್ರ॥ಶ್ರೀ॥ ಶ್ರೀ ಅನಂತಕೃಷ್ಣ ಶರ್ಮ ಯಜುರ್ವೇದ ಘನಪಾಠಿಗಳು ಮತ್ತು ವೇ॥ಬ್ರ॥ಶ್ರೀ॥ ಶ್ರೀ ಗುಂಡಭಟ್ಟರು ಋಗ್ವೇದ ಘನಪಾಠಿಗಳು ಆಶೀರ್ವಚನ ನುಡಿಗಳನ್ನು ಬರೆದು ಕೊಟ್ಟಿರುತ್ತಾರೆ. ಅವರಿಗೆ ನಾವು ನಮ್ಮ ಅನಂತಾನಂತ ವಂದನೆಗಳನ್ನು ತಿಳಿಸುತ್ತೇವೆ.

ನಂ.56. 3ನೇ ಬ್ಲಾಕ್
ತ್ಯಾಗರಾಜನಗರ
ಬೆಂಗಳೂರು-560 028.

ಶ್ರೀ ಗುರುಸಂಕಣ್ಣಾರ್ಯಾಶ್ರಮ ಟ್ರಸ್ಟಿನ ಪರವಾಗಿ
**ಎನ್.ಎಲ್. ಶ್ರೀಪಾದ**
ಕಾರ್ಯದರ್ಶಿ
ದಿನಾಂಕ : 01-09-2000

# ಶುಭಾಶಂಸನೆ

ಆಸ್ತಿಕ ಮಹಾಶಯರಲ್ಲಿ ವಿಜ್ಞಾಪನೆಗಳು, ಮಾನ್ಯ ಶ್ರೀ ಎಸ್. ಶ್ರೀನಿವಾಸ್ ಅವರು ಸಂಗ್ರಹಿಸಿರುವ ಅಗ್ನಿಮುಖ ಪ್ರಯೋಗ ವನ್ನು ಆಮೂಲಾಗ್ರವಾಗಿ ಅವಲೋಕಿಸಿದೆನು. ಸಾಮಾನ್ಯವಾಗಿ ಜನಗಳಿಗೆ ಕಷ್ಟ ಕಾರ್ಪಣ್ಯಗಳಿಂದಾಗಲಿ - ರೋಗರುಜನಗಳಿಂದಾಗಲಿ ಕಷ್ಟ ಬಂದಾಗ ಭಗವಂತನೆಡೆಗೆ ಮನಸ್ಸು ಹೋಗಿ - ತಮ್ಮ ಕಷ್ಟಗಳನ್ನು ಪರಿಹರಿಸುವಂತೆ ಮೊರೆಯಿಡುವುದು ಸ್ವಾಭಾವಿಕ ವಾಗ ಮೊರೆಯಿಟ್ಟು - ಭಗವಂತನನ್ನು ತೃಪ್ತಿ ಪಡಿಸುವುದೆಂದರೆ ವೇದೋಕ್ತ ಮಂತ್ರಗಳಿಂದ ಪೂಜೆ - ಜಪ -ಹೋಮಾದಿಗಳನ್ನು ಮಾಡುವುದರಿಂದ ಸಾಧ್ಯ. ಹೋಮ ಮಾಡುವುದೆಂದರ - ಆಯಾ ಸೂತ್ರಕಾರರು ಮಾಡಿರುವ - ಗೃಹ್ಯಸೂತ್ರಗಳಲ್ಲಿ ಹೇಳಿರುವ ರೀತಿಯಿಂದ ಮಾಡಿದರ ಮಾತ್ರ ನಮ್ಮ ಭಕ್ತಿಯು ಅಥವಾ ಪ್ರಾರ್ಥನೆಯು ಅವರಿಗೆ ಸಲ್ಲಿಸಿದರೆ ಅವರು ನಮಗ ಸಹಕರಿಸಲು ಸಾಧ್ಯ, ಏಕೆಂದರೆ ಅಗ್ನಿಮುಖ ವೈ ದೇವಾಃ ಎಂದು ಹೇಳುತ್ತದೆ ಅದರಂತೆ ಶ್ರೀ ಶ್ರೀನಿವಾಸರವರು ಸಂಗ್ರಹಿಸಿರುವ ಈ "ಅಗ್ನಿಮುಖ ಪ್ರಯೋಗ" ವನ್ನು ನೋಡಿದಾಗ ಇವರು ಬಹು ಶ್ರಮವಹಿಸಿ - ಶ್ರದ್ಧಾಳುಗಳಾಗಿ ಆಪಸ್ತಂಭ ಸೂತ್ರ ಪ್ರಕಾರವಾಗಿ ಚೆನ್ನಾಗಿ ಸಂಗ್ರಹಿಸಿದ್ದಾರೆ. ಇದರ ವಿಶೇಷವೆಂದರೆ ಹೋಮಾದಿಗಳನ್ನು ಮಾಡುವಾಗ ಉಪಯೋಗಿಸುವ ಎಲ್ಲಾ ಪದಾರ್ಥಗಳನ್ನು ಚಿತ್ರ ಸಹಿತವಾಗಿ ತೋರಿಸಿಕೊಟ್ಟು ಪಕ್ಕದಲ್ಲೇ ಕನ್ನಡದಲ್ಲಿ ಹೇಗೆ ಮಾಡಬೇಕೆಂಬ ವಿವರಣೆಯನ್ನು ಕೊಟ್ಟು ಉಪಕರಿಸಿದ್ದಾರೆ. ಆಸ್ತಿಕ ಮಹಾಜನಗಳು ಈ ಪುಸ್ತಕದಲ್ಲಿ ಹೇಳಿರುವಂತೆ ಆಚರಿಸಿ, ಭಗವಂತನಿಗೆ ತೃಪ್ತಿ ಪಡಿಸಿ, ತನ್ಮೂಲಕ ತಮ್ಮ ಇಷ್ಟಾರ್ಥಗಳನ್ನು ಪಡೆದು ಭಗವಂತನ ಕೃಪೆಗೆ ಪಾತ್ರರಾಗಲೆಂದು ಹಾರೈಸುತ್ತೇನೆ.

ಶ್ರೀ ಶ್ರೀನಿವಾಸರ ಈ ಅಗ್ನಿ ಮುಖ ಪ್ರಯೋಗವು ಬಹು ಚೆನ್ನಾಗಿದೆ.

ಬೆಂಗಳೂರು
24-09-1998

ಇತಿ ಸಜ್ಜನ ವಿಧೇಯ
ಅನಂತಕೃಷ್ಣ

# ಶುಭಾಶೀರ್ವಾದಗಳು

ವೇ||ಬ್ರಂ||ಶ್ರೀ|| ಶ್ರೀನಿವಾಸರವರು ತ್ಯಾಗರಾಜನಗರದಲಿ ಅನೇಕ ವಿದ್ಯಾರ್ಥಿಗಳಿಗೆ ವೇದ ಪಾಠವನ್ನು ಮಾಡುತ್ತಾ ಅವರನ್ನು ಸನ್ಮಾರ್ಗದತ್ತ ಒಯ್ಯುತ್ತಿದ್ದಾರೆ. ಈ ಕಾಲದಲ್ಲಿ ವಿದ್ಯೆ ತಿಳಿದವರು ಬೇರೆಯವರಿಗೆ ಹೇಳಿಕೊಡುವುದು ಲಾಭಕ್ಕಾಗಿ ಮಾತ್ರ. ಹಾಗಿರುವಾಗ ಆಧ್ಯಾತ್ಮಶಾಸ್ತ್ರ ಸನಾತನ ಧರ್ಮಪ್ರಚಾರ ಇಂತಹ ವಿಚಾರಗಳಲ್ಲಿ ಕೆಲಸ ಮಾಡುವವರು ಬಹು ವಿರಳ, ಯಾವ ಫಲಾಪೇಕ್ಷೆಯೂ ಇಲ್ಲದೆ ಮಾಡುವುದಂತೂ ಅಪೂರ್ವ ಸಂಗತಿಯೇ ಸರಿ.

ವೇ||ಬ್ರ||ಶ್ರೀ|| ಶ್ರೀನಿವಾಸರವರ ಮೂಲಕ ಅಂತಹ ಒಳ್ಳೆಯ ಕೆಲಸಗಳು ಆಗುತ್ತಿವೆ. ವೇದ ಪಾಠಕ್ಕೆ ಅನುಕೂಲವಾಗುವಂತೆ ಅವರು ಈಗಾಗಲೇ ದೇವತಾರ್ಚನೆ, ಪುಣ್ಯಾಹ, ನವಗ್ರಹ ಪೂಜೆ ಇಂಥ ವಿಷಯಗಳಲ್ಲಿ ಅನೇಕ ಪುಸ್ತಕಗಳನ್ನು ಎಲ್ಲರಿಗೂ ಮನದಟ್ಟಾಗುವಂತೆ ಬರೆದಿದ್ದಾರೆ. ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಲು ಪೂಜೆ, ಹೋಮ, ಜಪ, ತಪಸ್ಸು ಈ ರೀತಿ ಅನೇಕ ಮಾರ್ಗಗಳು ಇವೆ. ಇದರಲ್ಲಿ ಹೋಮಮಾರ್ಗ ವಿಶೇಷವಾದುದ್ದು, ಅದನ್ನು ವಿಧಿ ವಿಧಾನಗಳನ್ನು ಅರಿತು ಮಾಡಿದರೆ ಖಂಡಿತವಾಗಿಯೂ ಫಲ ಪ್ರಾಪ್ತಿಯಾಗುತ್ತದೆ. ಅರಿಯದೆ ಮಾಡಿದರೆ ಸಂಕಲ್ಪಸಾಧನೆಯಾಗುವುದಿಲ್ಲ. ಈ ದಿಕ್ಕಿನಲ್ಲಿ ಪುಸ್ತಕ ಉತ್ತಮ ಮಾರ್ಗದರ್ಶಿ.

ವೇ||ಬ್ರ||ಶ್ರೀ|| ಶ್ರೀನಿವಾಸರವರು ಮಂತ್ರಗಳನ್ನು ಬರೆದು ಪಕ್ಕದಲ್ಲೇ ಕನ್ನಡದಲ್ಲಿ ಕೈಕಂರ್ಯವನ್ನು ವಿವರಿಸಿರುವುದರಿಂದ ಅನೇಕರಿಗೆ ಪ್ರಯೋಗ ಮಾಡುವ ರೀತಿ ಚೆನ್ನಾಗಿ ಅರ್ಥವಾಗುತ್ತದೆ. ಮಾಡುವ ಕರ್ಮದಲ್ಲಿ ನ್ಯೂನತೆ ಕಡಿಮೆಯಾಗುತ್ತದೆ. ಅವರು ಈಗಾಗಲೇ ಅಗ್ನಿಮುಖ ಪ್ರಯೋಗವನ್ನು ಯಜುರ್ವೇದ ರೀತ್ಯಾ ಪುಣ್ಯಾಹವಾಚನದೊಂದಿಗೆ ಸಂಗ್ರಹಿಸಿದ್ದಾರೆ. ಈಗ ಋಗ್ವೇದ ರೀತ್ಯಾ ಅಗ್ನಿಮುಖ ಪ್ರಯೋಗವನ್ನು ಸೇರಿಸಿ ಬಹಳ ಉಪಕಾರ ಮಾಡಿದ್ದಾರೆ. ಮೊದಲನೆಯದಾಗಿ ಸ್ವಶಾಖೆಯಲ್ಲಿ ಹೋಮ ಪ್ರಯೋಗ ಮಾಡಿಕೊಳ್ಳಲು ಅನುಕೂಲ. ಎರಡನೆಯದಾಗಿ ಎರಡೂ ವೇದಗಳಲ್ಲಿ ಪ್ರಯೋಗ ಮಾಡುವವರಿಗಂತೂ ಸುಲಿದ ಬಾಳೆಹಣ್ಣು ನೀಡಿದಂತಾಗಿದೆ.

ವೇದಾಭಿಮಾನಿಗಳು, ಪುರೋಹಿತ ವರ್ಗದವರು, ಆಸ್ತಿಕ ಮಹಾಜನರು ಇದರ ಸಂಪೂರ್ಣ ಪ್ರಯೋಜನವನ್ನು ಪಡೆಯಲೆಂದು ಆಶಿಸುತ್ತಾ ನಮ್ಮ ಪೂರ್ಣ ಆಶೀರ್ವಾದಗಳನ್ನು ನೀಡುತ್ತಿದ್ದೇವೆ.

ಸ್ಥಳ : ತ್ಯಾಗರಾಜನಗರ
ಬೆಂಗಳೂರು
ದಿನಾಂಕ : 01-09-2000

ವೇ||ಬ್ರ||ಶ್ರೀ|| ಗುಂಡಭಟ್ಟ
ಋಗ್ವೇದ ಘನಪಾಠಿ

ಶ್ರೀ ಗಣೇಶಾಯ ನಮಃ

# ಸಂಗ್ರಹಕಾರನ ಮಾತುಗಳು

ಅಗ್ನಿಮುಖ ಪ್ರಯೋಗ (ಯಜುರ್ವೇದ ಹಾಗೂ ಋಗ್ವೇದ ರೀತ್ಯಾ) ಪುಸ್ತಕವನ್ನು ಸಂಗ್ರಹಿಸಿ ನಿಮ್ಮ ಹಸ್ತದಲ್ಲಿರಿಸಲು ನನಗೆ ಅತೀವವಾದ ಹರ್ಷವುಂಟಾಗಿದೆ.

ನಾನು ನನ್ನ ಉಪನಯನಾನಂತರ ವೇ||ಬ್ರ||ಶ್ರೀ|| ಸಿ.ಎಸ್. ನರಸಿಂಹ ಅಯ್ಯರ್‌ರವರಲ್ಲಿ ಲೌಕಿಕ ಗೃಹಸ್ಥರಿಗೆ ಬೇಕಾಗುವ ವೇದಭಾಗಗಳನ್ನು ಅಧ್ಯಯನ ಮಾಡಿರುತ್ತೇನೆ. ದೇವತಾಪೂಜೆ, ವ್ರತಗಳು, ಇತ್ಯಾದಿಗಳಂತಲ್ಲದೆ ಹೋಮಾದಿಗಳನ್ನು ಮಾಡಲು ಅಗ್ನಿಮುಖ ಪ್ರಯೋಗ ಬಲ್ಲವರ ಸಹಕಾರ ಮತ್ತು ಸಮಯಾನುಕೂಲ ಉತ್ಯಾದಿಗಳನ್ನು ಅನುಸರಿಸಬೇಕಾಗುವುದು ಅನಿವಾರ್ಯ ಈ ಕೊರತೆಯನ್ನು ನಿವಾರಿಸಲು ಸುಲಲಿತವಾದ ರೀತಿಯಲ್ಲಿ ಅಗ್ನಿಮುಖ ಪ್ರಯೋಗ ಭಾಗವನ್ನು ಬರೆಯಬೇಕೆಂಬ ಆಸಕ್ತಿಯುಂಟಾಗಿ ನನ್ನ ಶಿಷ್ಯಮಿತ್ರರಿಂದ ಪ್ರೋತ್ಸಾಹ ದೊರೆಯಿತು.

ದೈವಯೋಗದಿಂದ ಯಜುರ್ವೇದ ಘನಪಾಠಿಗಳಾದ ವೇ||ಬ್ರ||ಶ್ರೀ|| ಅನಂತಕೃಷ್ಣ ಮತ್ತು ಋಗ್ವೇದ ಘನಪಾಠಿಗಳಾದ ವೇ||ಬ್ರ||ಶ್ರೀ|| ಗುಂಡಭಟ್ಟರ ಪರಿಚಯ ಆಶೀರ್ವಾದ ಅನೇಕ ವರ್ಷಗಳಿಂದ ಲಭ್ಯವಾಗಿತ್ತು.

ಪ್ರಥಮತಃ ನನ್ನ ಸ್ವಶಾಖೆಯಾದ ಯಜುರ್ವೇದರೀತ್ಯಾ ಅಗ್ನಿಮುಖ ಪ್ರಯೋಗ ಪುಸ್ತಕವನ್ನು ವೇ||ಬ್ರ||ಶ್ರೀ|| ಅನಂತಕೃಷ್ಣರವರ ಮಾರ್ಗದರ್ಶನದಲ್ಲಿ ಬರೆದು, ಬೆಂಗಳೂರು ನಗರ, ತ್ಯಾಗರಾಜನಗರ ಬಡಾವಣೆ ದತ್ತಾತ್ರೇಯ ದೇವಸ್ಥಾನದ ವತಿಯಿಂದ ಪ್ರಕಟಿಸಲಾಯಿತು. ಆಗ ಮುದ್ರಿತವಾದ ಎಲ್ಲ ಪ್ರತಿಗಳು ಮಾರಾಟವಾಗಿ ಪುನಃ ಬೇಡಿಕೆ ಜಾಸ್ತಿಯಾಯಿತು. ಇದೇ ಸಂದರ್ಭದಲ್ಲಿ ನನ್ನ ಬಹು ಜನ ಶಿಷ್ಯ ಮಿತ್ರರು ಅಗ್ನಿಮುಖಪ್ರಯೋಗವನ್ನು ಯಜುರ್ವೇದ ರೀತಿಯಲ್ಲಿ ಬರೆದಿರುವಂತೆ ಋಗ್ವೇದ ರೀತಿಯಲ್ಲೂ ಬರೆದು ಪ್ರಕಟಿಸಿದರೆ ಋಗ್ವೇದ ಬಂಧುಗಳಿಗೂ ಉಪಯೋಗವಾಗುವುದಾಗಿ ಸಲಹಾಪೂರ್ವಕ ಒತ್ತಡ ತಂದರು. ಅವರುಗಳ ಅಭಿಮಾನ ಪೂರ್ವಕ ಒತ್ತಡಕ್ಕೆ ಕಟ್ಟುಬಿದ್ದು ವೇ||ಬ್ರ||ಶ್ರೀ|| ಗುಂಡಭಟ್ಟರನ್ನು ಸಂಪರ್ಕಿಸಿ ಅವರ ಮಾರ್ಗದರ್ಶನದಲ್ಲಿ ಋಗ್ವೇದ ರೀತ್ಯಾ ಅಗ್ನಿಮುಖ ಪ್ರಯೋಗವನ್ನು ಬರೆದಿರುತ್ತೇನೆ.

ಈ ಇಬ್ಬರೂ ವಿದ್ವಾಂಸರುಗಳು ತಮ್ಮ ವಿದ್ಯೆಯ ಅಂತಸ್ತನ್ನು ಗಣನೆಗೆ ತಂದುಕೊಳ್ಳದೆ ನನ್ನಂತಹ ಸಾಧಾರಣವ್ಯಕ್ತಿಗೆ, (ತಾವೇ ಸ್ವತಃ ಬರೆದು ಪ್ರಕಟಿಸಬಹುದಾಗಿದ್ದರೂ ಸಹ) ಮಾರ್ಗದರ್ಶನ ಮಾಡಿದುದಲ್ಲದೇ, ಮುದ್ರಣ ಕರಡು ಪ್ರತಿಯನ್ನು ತಮ್ಮ ಬಿಡುವಿಲ್ಲದ ಕಾರ್ಯಗಳ ಮಧ್ಯೆ ಪರಿಶೀಲಿಸಿ ಕೊಟ್ಟಿರುವುದು ನನ್ನ ಹಾಗು ಆಸ್ತಿಕ ಜನರ ಸುದೈವವೇ ಸರಿ. ಈ ಇಬ್ಬರು ಆಚಾರ್ಯ ಸಮರಾದ ವಿದ್ವಾಂಸರಿಗೆ ನನ್ನ ಅನಂತಾನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಈ ಹಿಂದೆ ತಿಳಿಸಿದಂತೆ ಯಜುರ್ವೇದ ಅಗ್ನಿಮುಖ ಪ್ರಯೋಗ ಪುಸ್ತಕ ಪುನರ್ಮುದ್ರಣವಾಗಬೇಕಾದ್ದರಿಂದಲೂ, ಹಾಗೂ ಋಗ್ವೇದ ಅಗ್ನಿಮುಖಪ್ರಯೋಗ ಪ್ರಕಟವಾಗಬೇಕಾದ್ದರಿಂದಲೂ. ಉಭಯ ಪ್ರಯೋಗಗಳನ್ನು ಒಂದೇ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಇದರೊಂದಿಗೆ ಹೆಚ್ಚು ಚಾಲ್ತಿಯಲ್ಲಿರುವ ಪುಣ್ಯಾಹ ಪ್ರಯೋಗವನ್ನು ಈ ಹಿಂದಿನಂತೆಯೇ ಸೇರಿಸಲಾಗಿದೆ.

ಈ ಪುಸ್ತಕದ ಕರಡು ಪ್ರತಿ ರಚನೆಯಲ್ಲಿ ಸಹಕರಿಸಿದ ಆತ್ಮೀಯ ಶಿಷ್ಯ ಚಿ||ರಾ|| ಎಸ್. ಎನ್. ಮೂರ್ತಿ (ಬಾಬು), ಶಿಷ್ಯ ಮಿತ್ರರಾದ ಅಡ್ವೋಕೇಟ್ ಶ್ರೀರಾಮಸ್ವಾಮಿ ದಂಪತಿಗಳು, ಶ್ರೀ ಸುಬ್ರಮಣ್ಯ ದಂಪತಿಗಳು ಇವರ ಶ್ರಮಕ್ಕೆ ಅಭಾರಿಯಾಗಿದ್ದೇನೆ. ವಿಶೇಷವೆಂದರೆ ಈ ಪುಸ್ತಕವು ಕರಡು ಪ್ರತಿಯ ರೂಪದಲ್ಲಿಯೇ ಪ್ರತಿರೂಪಗೊಂಡು (zerox) ನೂರಾರು ಆಸ್ತಿಕ ಜನರ ಕೈಸೇರಿ ಉಪಯೋಗವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಇದನ್ನು ಪುಸ್ತಕರೂಪದಲ್ಲಿ ಮುದ್ರಿಸಿ ಪ್ರಕಾರಗೊಳಿಸುವುದಕ್ಕೆ ಮುಖ್ಯ ಕಾರಣ ಕರ್ತರು ದತ್ತಾತ್ರೇಯ ದೇವಸ್ಥಾನದ ಕಾರ್ಯದರ್ಶಿಯವರಾದ ಶಿಷ್ಯ ಮಿತ್ರ ಶ್ರೀ ಎನ್. ಎಲ್. ಶ್ರೀಪಾದ ಹಾಗೂ ಇನ್ನೋರ್ವ ಅಂತರಂಗ ಶಿಷ್ಯ ಮಿತ್ರರು. ಇವರುಗಳಿಗೂ ಮತ್ತು ಈ ಪುಸ್ತಕ ರಚನೆಯ ಕಾಲದಲ್ಲಿ ಅತಿ ಮುಖ್ಯವಾದ ಗೃಹಶಾಂತಿಯನ್ನು ನೀಡಿ ಸಹಕರಿಸಿದ ನನ್ನ ಧರ್ಮಪತ್ನಿ ಚಿ||ಸೌ|| ಸುಶೀಲ ಹಾಗೂ ಈ ಕಾರ್ಯದಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕರಿಸಿ ಸಲಹೆ ಇತ್ತ ಎಲ್ಲ ಆಸ್ತಿಕ ಬಂಧುಗಳಿಗೆ ನಾನು ಋಣಿಯಾಗಿರುವುದಲ್ಲದೇ, ವೇದ ಪುರುಷನು ಅವರೆಲ್ಲರನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಯಾವ ರೀತಿಯಲ್ಲಾದರೂ, ಈ ಪುಸ್ತಕದಿಂದ ಆಸ್ತಿಕ ಜನರಿಗೆ ಯತ್ಕಿಂಚಿತ್ ಉಪಯೋಗವಾದರೆ, ಅದರ ಫಲವೆಲ್ಲಾ ನನ್ನ ಪೂಜ್ಯ ಗುರುಗಳಾದ ದಿವಂಗತ ವೇ||ಬ್ರ||ಶ್ರೀ|| ಸಿ. ಎಸ್. ನರಸಿಂಹ ಅಯ್ಯರ್‌ರವರ ಚರಣಗಳಿಗೆ ಅರ್ಪಿತ.

ಆಸ್ತಿಕ ಜನರು ಹಂಸಕ್ಷೀರನ್ಯಾಯದಂತೆ ಈ ಪುಸ್ತಕದಲ್ಲಿನ ಗುಣಗಳನ್ನುಗ್ರಹಿಸಿ, ದೋಷಗಳನ್ನೂ ತಿಳಿಸಿಕೊಟ್ಟರೆ ಮುಂದಿನ ಮುದ್ರಣದಲ್ಲಿ ಅಳವಡಿಸಲು ಅನುಕೂಲವಾಗುತ್ತದೆ.

ವೇದ ಪುರುಷನ ಅನುಗ್ರಹವು ಎಲ್ಲರಿಗೂ ಸದಾಕಾಲದಲ್ಲಿ ಉಂಟಾಗಲೆಂದು ಹಾರೈಸುತ್ತೇನೆ.


ಸ್ಥಳ : ನಂ.72/6, ಸುಪ್ರಸನ್ನಾ
ಸಾಯಿ ಮಂದಿರ ಹಿಂಭಾಗ
1ನೇ ಬ್ಲಾಕ್, ತ್ಯಾಗರಾಜನಗರ
ಬೆಂಗಳೂರು - 560 028

**ಸ. ಶ್ರೀನಿವಾಸ**
01-09-2000

॥ ಓಂ ಶ್ರೀ ಮಹಾಗಣಪತಯೇ ನಮಃ ॥

# ಪುಣ್ಯಾಹವಾಚನ ಪ್ರಯೋಗಃ

(ಫಲಪುಷ್ಪ ಸಹಿತವಾದ ಮಂಗಳ ದ್ರವ್ಯದ ತಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಸಪತ್ನೀಕನಾಗಿ ಇಷ್ಟ ಮತ್ತು ಕುಲದೇವತೆಗಳಿಗೆ ನಮಸ್ಕರಿಸಿ ಸಭೆಯನ್ನು ವಂದಿಸಬೇಕು)

ನಮಸ್ಸದಸೇ । ನಮಸ್ಸದಸಸ್ಪತಯೇ । ನಮಃ ಸಖೀನಾಂ ಪುರೋಗಾಣಾಂ ಚಕ್ಷುಷೇ । ನಮೋ ದಿವೇ । ನಮಃ ಪೃಥಿವ್ಯೈ । ಸಪ್ರಥ ಸಭಾಂ ಮೇ ಗೋಪಾಯ । ಯೇ ಚ ಸಭ್ಯಾಸ್ಸಭಾಸದಃ । ತಾನಿಂದ್ರಿಯಾವತಃ ಕುರು । ಸರ್ವಮಾಯುರುಪಾಸತಾಂ ॥

**ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮಃ । ಸುಮುಹೂರ್ತೋಽಸ್ತ್ವಿತಿ ಭವಂತೋ ಬ್ರುವಂತು ॥**

(ಘಂಟೆಯನ್ನು ಬಾರಿಸುತ್ತ ಕೆಳಗಿನ ಮನ್ತ್ರವನ್ನು ಹೇಳಬೇಕು)

**ಓಂ ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।**
**ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥**

**ಸುಮುಹೂರ್ತೋಽಸ್ತು । ಸುಪ್ರತಿಷ್ಠಿತಮಸ್ತು ।**

ದೇವೀಂ ವಾಚಮಜನಯಂತ ದೇವಾಃ । ತಾಂ ವಿಶ್ವರೂಪಾಃ ಪಶವೋ ವದಂತಿ । ಸಾನೋ ಮಂದ್ರೇಷಮೂರ್ಜಂ ದುಹಾನಾ । ಧೇನುರ್ವಾಗಸ್ಮಾನುಪಸುಷ್ಟುತೈತು ॥

ಸುಮುಹೂರ್ತೋಽಸ್ತು । ಸುಪ್ರತಿಷ್ಠಿತಮಸ್ತು ॥

ಧ್ರುವಂತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।
ಧ್ರುವಂತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಂ ॥

**ಸುಮುಹೂರ್ತೋಽಸ್ತು । ಸುಪ್ರತಿಷ್ಠಿತಮಸ್ತು ॥**

(ಪವಿತ್ರ ಧರಿಸಿ ಕರ್ಮಾಂಗ ಉದ್ದಿಶ್ಯ ಪುಣ್ಯಾಹವಾಚನಾಂಗ ಗಣಪತಿ, ವಾಸ್ತು ವರುಣ ಪೂಜಾ ಸಂಕಲ್ಪವನ್ನು ಮಾಡಬೇಕು. ಅನಂತರ ಕಲಶಪೂಜೆಯನ್ನು ಮಾಡಬೇಕು)

## ॥ ಗಣಪತಿ ಪೂಜೆ ॥

**ಪ್ರಾರೀಪ್ಸಿತಸ್ಯ ಕರ್ಮಣಃ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಆದೌ ಮಹಾಗಣಪತಿ ಪೂಜಾಂ ಕರಿಷ್ಯೇ ।**

**ಸುಮುಖಶ್ಚೈಕ ದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ವಿನಾಯಕಃ ॥**

**ಧೂಮಕೇತುರ್ಗಣಾಧ್ಯಕ್ಷಃ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪಿ ॥**

**ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥**

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥**

ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋ ಯಸ್ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥

ಓಂ ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ । ಕವಿಂ ಕವೀನಾಮುಪಮಶ್ರವಸ್ತಮಂ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂತಿಭಿಸ್ಸೀದ ಸಾದನಂ ॥

ಅಸ್ಮಿನ್ ಬಿಂಬೇ -

ಓಂ ಭೂಃ - ಗಣಪತಿಮಾವಾಹಯಾಮಿ ।

ಓಂ ಭುವಃ - ಗಣಪತಿಮಾವಾಹಯಾಮಿ ।

ಓಗ್ಂ ಸುವಃ - ಗಣಪತಿಮಾವಾಹಯಾಮಿ ।

ಓಂ ಭೂರ್ಭುವಸ್ಸುವಃ - ಗಣಪತಿಮಾವಾಹಯಾಮಿ । ಸ್ಥಾಪಯಾಮಿ ಪೂಜಯಾಮಿ ।

ಓಂ ಮಹಾಗಣಪತಯೇ ನಮಃ । ಧ್ಯಾಯಾಮಿ - ಧ್ಯಾನಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಆವಾಹಯಾಮಿ - ಆಸನಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಪಾದಯೋಃ - ಪಾದ್ಯಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಹಸ್ತಯೋಃ - ಅರ್ಘ್ಯಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಮುಖೇ - ಆಚಮನೀಯಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಸ್ನಪಯಾಮಿ - ಸ್ನಾನಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ವಸ್ತ್ರಾರ್ಥೇ - ಅಕ್ಷತಾನ್ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಉಪವೀತಾರ್ಥೇ - ಪುಷ್ಪಾಣಿ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಆಭರಣಾರ್ಥೇ - ಅಕ್ಷತಾಣಿ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಗಂಧಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಮಂಗಳದ್ರವ್ಯಾಣಿ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಅಕ್ಷತಾಣಿ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಪುಷ್ಪಾಣಿ ಪೂಜಯಾಮಿ ।

(ದ್ವಾದಶ ಅಥವಾ ಏಕವಿಂಶತಿ ನಾಮಗಳಿಂದ ಗಣಪತಿಯನ್ನು ಪೂಜಿಸುವುದು)

ಓಂ ಮಹಾಗಣಪತಯೇ ನಮಃ । ಧೂಪಮಾಘ್ರಾಪಯಾಮಿ ।

ಓಂ ಮಹಾಗಣಪತಯೇ ನಮಃ । ದೀಪಂ ದರ್ಶಯಾಮಿ ।

ಓಂ ಮಹಾಗಣಪತಯೇ ನಮಃ । ನೈವೇದ್ಯಾರ್ಥೇ ಕದಳೀ ಫಲಂ ನಿವೇದಯಾಮಿ ।

ಓಂ ಮಹಾಗಣಪತಯೇ ನಮಃ । ತಾಂಬೂಲಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ದಕ್ಷಿಣಾಂ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಉತ್ತರ ನೀರಾಜನಂ ಸಂದರ್ಶಯಾಮಿ ।

ಓಂ ಮಹಾಗಣಪತಯೇ ನಮಃ । ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ ।

ಓಂ ಮಹಾಗಣಪತಯೇ ನಮಃ । ಪ್ರಾರ್ಥನಾಂ ಸಮರ್ಪಯಾಮಿ ।

ಅನಯಾ ಪೂಜಯಾ ಭಗವಾನ್ ಸರ್ವಾತ್ಮಕಃ ಸರ್ವಂ ಶ್ರೀ ಮಹಾಗಣಪತಿ ಸುಪ್ರೀತಾ ಸುಪ್ರಸನ್ನಾ ವರದಾ ಭವತು । ಮಹಾಗಣಪತಿ ಪ್ರಸಾದ ಸಿದ್ಧಿರಸ್ತು ।

(ಈ ರೀತಿಯಲ್ಲಿ ಮಹಾಗಣಪತಿಯನ್ನು ಯಥಾಶಕ್ತಿಯಲ್ಲಿ ಪೂಜಿಸಬೇಕು)

## ॥ ವಾಸ್ತು ವರುಣ ಪೂಜೆ ॥

(ಎರಡು ಕಲಶಗಳನ್ನು ಒಂದು ತಟ್ಟೆಯಲ್ಲಿ ಅಕ್ಕಿಯನ್ನು ಹಾಕಿ ಅದರ ಮೇಲೆ ಇಡಬೇಕು. ಕಲಶಗಳಿಗೆ ನೀರು, ಮನ್ತ್ರಾಕ್ಷತೆ, ಗಂಧ, ಹೂವು, ದಕ್ಷಿಣೆ ಇತ್ಯಾದಿ ಮಂಗಳ ದ್ರವ್ಯಗಳನ್ನು ಹಾಕಬೇಕು. ಕಲಶಗಳಿಗೆ ಸುಣ್ಣವನ್ನು ಇಲ್ಲದಿದ್ದರೆ ಅರಶಿನ/ಗಂಧವನ್ನು ಸುತ್ತಲೂ ಹಚ್ಚಬೇಕು. ಅದರ ಮೇಲೆ ಮಾವಿನ ಕೊನೆಯನ್ನು ಇಟ್ಟು ನಂತರ ಅರಿಶಿನ, ಕುಂಕುಮ ಹಚ್ಚಿದ ತೆಂಗಿನಕಾಯಿಗಳನ್ನು ಇಡಬೇಕು. ಅನುಕೂಲಕ್ಕೆ ತಕ್ಕಂತೆ ವಸ್ತ್ರಾದಿಗಳಿಂದ ಅಲಂಕರಿಸಬಹುದು. ನಂತರ (ಬಲ) ದಕ್ಷಿಣ ಭಾಗದ ಕಲಶದಲ್ಲಿ ವರುಣನನ್ನೂ (ಎಡ) ಉತ್ತರ ಭಾಗದ ಕಲಶದಲ್ಲಿ ವಾಸ್ತು ಪುರುಷನನ್ನೂ ಆವಾಹಿಸಿ ಪೂಜಿಸಬೇಕು.)

### ವರುಣ ಪೂಜೆ : (ದಕ್ಷಿಣ ಕಲಶದಲ್ಲಿ)

ಓಂ ಇಮಂ ಮೇ ವರುಣ ಶ್ರುಧೀಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ । ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡ ಮಾನೋ ವರುಣೇಹ ಬೋಧ್ಯುರುಷಗ್ಂ ಸಮಾನ ಆಯುಃ ಪ್ರಮೋಷೀಃ ॥

ಅಸ್ಮಿನ್ ದಕ್ಷಿಣ ಕಲಶೇ -

ಓಂ ಭೂಃ - ವರುಣಮಾವಾಹಯಾಮಿ ।

ಓಂ ಭುವಃ - ವರುಣಮಾವಾಹಯಾಮಿ ।

ಓಗ್‌ಂ ಸುವಃ - ವರುಣಮಾವಾಹಯಾಮಿ ।

ಓಂ ಭೂರ್ಭುವಸ್ಸುವಃ - ವರುಣಮಾವಾಹಯಾಮಿ । ಸ್ಥಾಪಯಾಮಿ ಪೂಜಯಾಮಿ ॥

ವಾಸ್ತು ಪುರುಷ ಪೂಜೆ (ಉತ್ತರ ಕಲಶದಲ್ಲಿ)

ಓಂ ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾನ್ಸ್ವಾವೇಶೋ ಅನಮೀವೋ ಭವಾನಃ । ಯತ್ತ್ವೇ ಮಹೇ ಪ್ರತಿ ತನ್ನೋ ಜುಷಸ್ವ ಶಂ ನ ಏಧಿ ದ್ವಿಪದೇ ಶಂ ಚತುಷ್ಪದೇ ॥

ಅಸ್ಮಿನ್ ಉತ್ತರ ಕಲಶೇ -

ಓಂ ಭೂಃ - ವಾಸ್ತು ಪುರುಷಮಾವಾಹಯಾಮಿ ।

ಓಂ ಭುವಃ - ವಾಸ್ತು ಪುರುಷಮಾವಾಹಯಾಮಿ ।

ಓಗ್‌ಂ ಸುವಃ - ವಾಸ್ತು ಪುರುಷಮಾವಾಹಯಾಮಿ ।

ಓಂ ಭೂರ್ಭುವಸ್ಸುವಃ - ವಾಸ್ತು ಪುರುಷಮಾವಾಹಯಾಮಿ । ಸ್ಥಾಪಯಾಮಿ ಪೂಜಯಾಮಿ ॥

(ವರುಣ ಮತ್ತು ವಾಸ್ತು ಪುರುಷರಿಗೆ ಸಮಷ್ಟಿಯಲ್ಲಿ ಪೂಜೆಯನ್ನು ಮಾಡಬೇಕು)

ವಾಸ್ತು ವರುಣಾಭ್ಯಾಂ ನಮಃ ।

ಧ್ಯಾಯಾಮಿ - ಧ್ಯಾನಂ ಸಮರ್ಪಯಾಮಿ ।

ಆವಾಹಯಾಮಿ - ಆಸನಂ ಸಮರ್ಪಯಾಮಿ ।

ಪಾದಯೋಃ - ಪಾದ್ಯಂ ಸಮರ್ಪಯಾಮಿ ।

ಹಸ್ತಯೋಃ - ಅರ್ಘ್ಯಂ ಸಮರ್ಪಯಾಮಿ ।

ಮುಖೇ - ಆಚಮನೀಯಂ ಸಮರ್ಪಯಾಮಿ ।

ಸ್ನಪಯಾಮಿ - ಸ್ನಾನಂ ಸಮರ್ಪಯಾಮಿ ।

ವಸ್ತ್ರಾರ್ಥೇ - ಅಕ್ಷತಾನ್ ಸಮರ್ಪಯಾಮಿ ।

ಉಪವೀತಾರ್ಥೇ - ಪುಷ್ಪಾಣಿ ಸಮರ್ಪಯಾಮಿ ।

ಆಭರಣಾರ್ಥೇ - ಅಕ್ಷತಾಣಿ ಸಮರ್ಪಯಾಮಿ ।

ಗಂಧಂ ಸಮರ್ಪಯಾಮಿ ।

ಮಂಗಳದ್ರವ್ಯಾಣಿ ಸಮರ್ಪಯಾಮಿ ।

ಅಕ್ಷತಾಣಿ ಸಮರ್ಪಯಾಮಿ ।

ಪುಷ್ಪಾಣಿ ಪೂಜಯಾಮಿ ।

ಓಂ ವರುಣಾಯ ನಮಃ ।

ಓಂ ಪ್ರಚೇತಸೇ ನಮಃ ।

ಓಂ ಅಪಾಂಪತಯೇ ನಮಃ ।

ಓಂ ಸುರೂಪಿಣೇ ನಮಃ ।

ಓಂ ಮಕರವಾಹನಾಯ ನಮಃ ।

ಓಂ ಜಲಾಧಿವಾಸಾಯ ನಮಃ ।

ಓಂ ಪಾಶುಹಸ್ತಾಯ ನಮಃ ।

ಓಂ ವಾಸ್ತುವರುಣಾಭ್ಯಾಂ ನಮಃ ।

ನಾನಾವಿಧ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ ॥

(ನಂತರ ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆ, ಉತ್ತರ ನೀರಾಜನ, ಮಂತ್ರಪುಷ್ಪ, ನಮಸ್ಕಾರ, ಪ್ರಾರ್ಥನೆ ಇತ್ಯಾದಿಗಳನ್ನು ಯಥಾ ವಿಧಿಯಲ್ಲಿ ಮಾಡಬೇಕು)

ಅನಯಾ ಪೂಜಯಾ ವಾಸ್ತು ವರುಣ ಪ್ರೀಯಂತಾಂ ॥

(ಹೀಗೆ ಹೇಳುತ್ತಾ ಮಂತ್ರಾಕ್ಷತೆ ಮತ್ತು ನೀರನ್ನು ಬಿಡಬೇಕು)

(ಹೂವು ಮತ್ತು ಮಂತ್ರಾಕ್ಷತೆ ಕೈಯಲ್ಲಿ ಹಿಡಿದು ಕಲಶಗಳಿರುವ ತಟ್ಟೆಯನ್ನು ಮುಟ್ಟಿಕೊಂಡಿರುವುದು)

ಸರ್ವೇಷು ಕಾಲೇಷು ಸಮಸ್ತ ದೇಶೇಶ್ವಶೇಷು
ಕಾರ್ಯೇಷು ತಥೇಶ್ವರೇಶ್ವರಃ ।
ಸರ್ವ ಸ್ವರೂಪಿ ಭಗವಾನ್ ಅನಾದಿಮಾನ್ ಮಮಾಸ್ತು
ಮಾಂಗಲ್ಯಂ ವಿವೃದ್ಧಯೋ ಹರಿಃ ॥

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋಭೂರ್ತಿಧ್ರುವಾನೀತಿರ್ಮತಿರ್ಮಮ ॥

ಅನನ್ಯಾಶ್ಚಿಂತ ಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

ಸ್ಮೃತೇ ಸಕಲ ಕಲ್ಯಾಣ ಭಾಜನಂ ಯತ್ರ ಜಾಯತೇ ।
ಪುರುಷಂ ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಂ ॥

ಸರ್ವ ಮಂಗಳ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಸ್ತುತೇ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

(ನಂತರ ಉಭಯ ಕಲಶಗಳಿಗೂ ಮನ್ತ್ರಾಕ್ಷತೆಯಿಂದ ಪೂಜಿಸಬೇಕು)

ಕಲಶಯೋಃ –

ಲಕ್ಷ್ಮೀ ನಾರಾಯಣಾಭ್ಯಾಂ ನಮಃ ।

ಉಮಾಮಹೇಶ್ವರಾಭ್ಯಾಂ ನಮಃ ।

ವಾಣಿ ಹಿರಣ್ಯಗರ್ಭಾಭ್ಯಾಂ ನಮಃ ।

ಶಚೀ ಪುರಂದರಾಭ್ಯಾಂ ನಮಃ ।

ಅರುಂಧತೀ ವಸಿಷ್ಠಾಭ್ಯಾಂ ನಮಃ ।

ಸೀತಾರಾಮಾಭ್ಯಾಂ ನಮಃ ।

ಮಾತೃಭ್ಯೋ ನಮಃ ।
ಪಿತೃಭ್ಯೋ ನಮಃ ।
} (ಅನುಕೂಲವಿದ್ದರೆ ಹಿರಿಯರಿಗೆ ಪಾದ ಪೂಜೆಯನ್ನು ಮಾಡಬೇಕು, ಪವಿತ್ರ ರಹಿತ)

ಗುರುಭ್ಯೋ ನಮಃ । ಆಚಾರ್ಯೇಭ್ಯೋ ನಮಃ । ಇಷ್ಟದೇವತಾಭ್ಯೋ ನಮಃ । ಕುಲದೇವತಾಭ್ಯೋ ನಮಃ । ಗ್ರಾಮಾದಿ ದೇವತಾಭ್ಯೋ ನಮಃ ।

(ನಂತರ ಸದಸ್ಸಿನಲ್ಲಿರುವ ವಿಪ್ರರನ್ನು ಪ್ರಾರ್ಥಿಸಬೇಕು)

ಸರ್ವೇಭ್ಯೋ ಮಹಾಜನೇಭ್ಯೋ ನಮಃ । ಸುಮುಹೂರ್ತೋಽಸ್ತ್ವಿತಿ ಭವಂತೋ ಬ್ರುವಂತು । ಸುಮುಹೂರ್ತೋಽಸ್ತು ।

(ಮತ್ತೆ ಆಚಮನ ಮಾಡಿ, ಪವಿತ್ರ ಧರಿಸುವುದು)

(ಕರ್ಮಾಂಗ ಉದ್ದಿಶ್ಯ ಪುಣ್ಯಾಹವಾಚನ ಸಂಕಲ್ಪವನ್ನು ಮಾಡಬೇಕು)

ಓಂ ಭೂಃ .... ಅಸ್ಮಾಕಂ ಸಹ ಕುಟುಂಬಾನಾಂ ವಿಶೇಷೇಣ ಸಮಸ್ತ ಮಂಗಳಾವಾಪ್ತ್ಯರ್ಥಂ ಆದಿತ್ಯಾನಾಂ ನವಾನಾಂ ಗ್ರಹಾಣಾನಾಂ ಅನುಕೂಲ್ಯಥಾ ಸಿದ್ಧ್ಯರ್ಥಂ ಯೇ ಯೇ ಗ್ರಹಾಃ ಅರಿಷ್ಟ ಸ್ಥಾನೇಷು ಸ್ಥಿತಾಃ ತೇಷಾಂ ಗ್ರಹಾಣಾಂ ಅನುಕೂಲ್ಯತಾ ಸಿದ್ಧ್ಯರ್ಥಂ ಯೇ ಯೇ ಗ್ರಹಾಃ ಶುಭ ಸ್ಥಾನೇಷು ಸ್ಥಿತಾಃ ತೇಷಾಂ ಗ್ರಹಾಣಾಂ ಅತ್ಯನುಕೂಲ್ಯತಾ ಸಿದ್ಧ್ಯರ್ಥಂ ಅದ್ಯ ಕರಿಷ್ಯಮಾಣಃ .... ಪೂಜಾಖ್ಯಂ (ಹೋಮಾಖ್ಯಂ) ಕರ್ಮಕರಿಷ್ಯಮಾಣಃ । ತದಾದೌ ಶುದ್ಧ್ಯರ್ಥಂ ವೃದ್ಧ್ಯರ್ಥಂ ಅಭ್ಯುದಯಾರ್ಥಂ ಚ ಮಹಾಜನೇ ಸಹ ಸ್ವಸ್ತಿ ಪುಣ್ಯಾಹವಾಚನಂ ಕರಿಷ್ಯೇ ॥

| | |
|---|---|
| ಓಮಾಪಃ । | ಶಿವಾ ಆಪಸ್ಸಂತು । |
| ಸೌಮನಸ್ಯಮಸ್ತು । | ಅಕ್ಷತಂ ಚಾರಿಷ್ಟಂಚಾಸ್ತು । |
| ಗಂಧಾಃ ಪಾಂತು । | ಸೌಮಂಗಲ್ಯಂಚಾಸ್ತು । |
| ಅಕ್ಷತಾಃ ಪಾಂತು । | ಆಯುಷ್ಯಮಸ್ತು । |
| ಪುಷ್ಪಾಣಿ ಪಾಂತು । | ಸೌಶ್ರಿಯಮಸ್ತು । |
| ತಾಂಬೂಲಾನಿ ಪಾಂತು । | ಐಶ್ವರ್ಯಮಸ್ತು । |
| ದಕ್ಷಿಣಾಃ ಪಾಂತು । | ಬಹುದೇಯಂ ಚಾಸ್ತು ॥ |

ಯಂ ಕೃತ್ವಾ ಸರ್ವ ವೇದ ಯಜ್ಞ ಕ್ರಿಯಾಕರಣ ಕರ್ಮಾರಂಭಾಃ ಶುಭಾಃ ಶೋಭನಾಃ ಪ್ರವರ್ತಂತೇ । ತಮಹಮೋಂಕಾರಮಾದಿಂ ಕೃತ್ವಾ ಭವದ್ಭಿರನುಜ್ಞಾತಃ ಪುಣ್ಯಂ ಪುಣ್ಯಾಹಂ ವಾಚಯಿಷ್ಯೇ ॥

(ಹೀಗೆಂದು ಬ್ರಾಹ್ಮಣರನ್ನು ಪೂಜಿಸಿ ಪುಣ್ಯಾಹವಾಚನಕ್ಕೆ ಪ್ರಾರ್ಥಿಸಬೇಕು)

ವಾಚ್ಯತಾಂ ।

(ಪ್ರತಿಯಾಗಿ ಬ್ರಾಹ್ಮಣರು ಹೇಳುತ್ತೇವೆನ್ನುತ್ತಾರೆ)

## ॥ ಪುಣ್ಯಾಹವಾಚನ ॥

ಓಂ ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಗ್ಂ ಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥

ದ್ರವಿಣೋದಾ ದ್ರವಿಣ ಸಸ್ತುರಸ್ಯ ದ್ರವಿಣೋದಾಸ್ತನರಸ್ಯ ಪ್ರಯಂಸತ್ । ದ್ರವಿಣೋದಾವೀರವತೀ ಮಿಷಂ ನ್ನೋ ದ್ರವಿಣೋದಾರಾಸತೇ ದೀರ್ಘಮಾಯುಃ ॥ ಸವಿತಾ ಪಶ್ಚಾತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾ ಧರಾತ್ತಾತ್ । ಸವಿತಾನಸ್ಸುವತು ಸರ್ವತಾತಿಂ ಸವಿತಾನೋ ರಾಸತಾಂ ದೀರ್ಘಮಾಯುಃ ॥

ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾ ಮೇತ್ಯಗ್ರೇ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ಪ್ರಚಂದ್ರಮಾಸ್ತಿರತಿ ದೀರ್ಘಮಾಯುಃ ॥

ಆಪ ಉಂದಂತು ಜೀವಸೇ ದೀರ್ಘಾಯುತ್ವಾಯ ವರ್ಚಸೇ । ಯಸ್ತ್ವಾ ಹೃದಾ ಕೀರಿಣಾಮನ್ಯಮಾನೋ ಮರ್ತ್ಯಂ ಮರ್ತ್ಯೋ ಜೋಹವೀಮಿ । ಜಾತವೇದೋ ಯಶೋ ಅಸ್ಮಾಸುದೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥

ಯಸ್ಮೈಲತ್ವಗ್ಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಸ್ಯೋನಂ । ಅಶ್ವಿನಗ್ಂ ಸುಪುತ್ರಿಣಂ ವೀರವಂತಂ ಗೋಮಂತಗ್ಂ ರಯಿಂ ನಶತೇ ಸ್ವಸ್ತಿ ॥

ಸಂತ್ವಾ ಸಿಂಚಾಂಮಿ ಯಜುಷಾ ಪ್ರಜಾಮಾಯುರ್ಧನಂ ಚ । ದೀರ್ಘಮಾಯುರಸ್ತು ॥

(ನಂತರ ದಕ್ಷಿಣದ (ವರುಣ) ಕಲಶದಿಂದ ನೀರನ್ನು ಉದ್ಧರಣೆಯಲ್ಲಿ ತೆಗೆದು ಅರ್ಘ್ಯಪಾತ್ರೆಗೆ ಈ ಕೆಳಗಿನ ಮನ್ತ್ರಗಳಿಂದ ಹಾಕಬೇಕು)

**ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ವೃದ್ಧಿರಸ್ತು । ಅವಿಘ್ನಮಸ್ತು । ಆಯುಷ್ಯಮಸ್ತು । ಆರೋಗ್ಯಮಸ್ತು । ಸ್ವಸ್ತ್ಯಸ್ತು । ಶುಭಂ ಕರ್ಮಾಸ್ತು । ಕರ್ಮ ಸಮೃದ್ಧಿರಸ್ತು । ಪುತ್ರ ಸಮೃದ್ಧಿರಸ್ತು । ವೇದ ಸಮೃದ್ಧಿರಸ್ತು । ಶಾಸ್ತ್ರ ಸಮೃದ್ಧಿರಸ್ತು । ಧನ ಧಾನ್ಯ ಸಮೃದ್ಧಿರಸ್ತು । ಇಷ್ಟ ಸಂಪದಸ್ತು ॥**

(ಈಶಾನ್ಯ ದಿಕ್ಕಿನಲ್ಲಿ ನೀರನ್ನು ಬಿಡಬೇಕು)

**ಈಶಾನ್ಯಾಂ ಬಹಿರ್ದೇಶೇ ಅರಿಷ್ಟನಿರಶನಮಸ್ತು । ಯತ್ಪಾಪಂ ತತ್ಪ್ರತಿಹತಮಸ್ತು । ಯಚ್ಛ್ರೇಯಸ್ತದಸ್ತು । ಶುಕ್ರಾಂಗಾರಕ ಬುಧ ಬೃಹಸ್ಪತಿ ಶನೈಶ್ಚರ ರಾಹುಕೇತು ಸೋಮ ಸಹಿತ ಆದಿತ್ಯ ಪುರೋಗಾಂ ಸರ್ವೇ ಗ್ರಹಾಃ ಪ್ರೀಯತಾಂ ॥ ತಿಥಿ ಕರಣ ಮುಹೂರ್ತ ಜನ್ಮ ನಕ್ಷತ್ರ ದಿಗ್ದೇವತಾಃ ಪ್ರೀಯಂತಾಂ ॥**

(ನೈರುತ್ಯ ದಿಕ್ಕಿನಲ್ಲಿ ನೀರನ್ನು ಬಿಡಬೇಕು)

**ಶಾಮ್ಯಂತು ಘೋರಾಣಿ । ಶಾಮ್ಯಂತು ಪಾಪಾನಿ । ಶಾಮ್ಯಂತ್ವೀತಯಃ । ಶುಭಾನಿ ವರ್ಧತಾಂ । ಶಿವಾ ವಸವಸ್ಸಂತು । ಶಿವಾ ಓಷಧಯಸ್ಸಂತು । ಶಿವಾ ವನಸ್ಪತಯಸ್ಸಂತು । ಅಹೋರಾತ್ರೇ ಶಿವೇಸ್ಯಾತಾಂ ।**

( ಉತ್ತರ ದಿಕ್ಕಿನಲ್ಲಿ ನೀರನ್ನು ಬಿಡಬೇಕು)

**ಉತ್ತರೇ ಕರ್ಮಣ್ಯ ನಿರ್ವಿಘ್ನಮಸ್ತು । ಉತ್ತರೋತ್ತರಮಹರಹಃ ಅಭಿ ವೃದ್ಧಿರಸ್ತು । ಉತ್ತರೋತ್ತರ ಶುಭಾಃ ಕ್ರಿಯಾಸ್ಸಂಪದ್ಯಂತಾಂ ॥**

(ಅರ್ಘ್ಯ ಪಾತ್ರೆಗೆ ನೀರನ್ನು ಹಾಕಬೇಕು)

ಅಗ್ನಿ ಪುರೋಗಾ ವಿಶ್ವೇ ದೇವಾ ಪ್ರೀಯಂತಾಂ । ಮಹೇಶ್ವರೀ ಪುರೋಗಾಮಾತರಃ ಪ್ರೀಯಂತಾಂ । ವಸಿಷ್ಠ ಪುರೋಗಾ ಋಷಿಗಣಾಃ ಪ್ರೀಯಂತಾಂ । ಶ್ರೀ ವಿಷ್ಣು ಪುರೋಗಾ ಸರ್ವೇ ದೇವಾಃ ಪ್ರೀಯಂತಾಂ। ವೇದಯಜ್ಞ ದಕ್ಷಿಣಾಶ್ಚ ಪ್ರೀಯಂತಾಂ ॥

ಬ್ರಹ್ಮ ಚ ಬ್ರಾಹ್ಮಣಾಶ್ಚ ಪ್ರೀಯಂತಾಂ । ಶ್ರದ್ಧಾ ಮೇಧೇ ಪ್ರೀಯಂತಾಂ । ಪ್ರೀಯಂತಾಂ ಭಗವಾನ್ ನಾರಾಯಣಃ । ಪ್ರೀಯಂತಾಂ ಭಗವಾನ್ ಪರ್ಜನ್ಯಃ । ಪ್ರೀಯಂತಾಂ ಭಗವಾನ್ ಸ್ವಾಮಿ ಮಹಾಸೇನಾಃ । ಸತ್ಯಾ ಏಷಾ ಆಶಿಷಸ್ಸಂತು ॥

॥ ಪುಣ್ಯಾಹ ಕಾಲ ವಾಚಯಿಷ್ಯೇ ॥

॥ ಪುಣ್ಯಾಹ ಕಾಲಾವಾಚ್ಯಂತಾಂ ॥

ಉದ್ಗಾತೇವ ಶಕುನೇ ಸಾಮಗಾಯಸಿ । ಬ್ರಹ್ಮಪುತ್ರ ಇವ ಸವನೇಷು ಶಂಸಸಿ । ವೃಷೇವ ವಾಜೀ ಶಿಶುಮತೀ ರಪೀತ್ಯಾ ಸರ್ವತೋನಶ್ಶಕುನೇ ಭದ್ರಮವದ । ವಿಶ್ವತೋ ನಶ್ಶುಕುನೇ ಪುಣ್ಯಮಾವದ ॥

ಯಾಜ್ಯಯಾ ಯಜತಿ ಪ್ರತ್ತೀರ್ವೈ ಯಾಜ್ಯಾ ಪುಣ್ಯೇವ ಲಕ್ಷ್ಮೀಃ ಪುಣ್ಯಾಮೇವ ತಲ್ಲಕ್ಷ್ಮೀಂ ಸಂಭಾವಯತಿ ಪುಣ್ಯಾಂ ಲಕ್ಷ್ಮೀಂ ಸಂಸ್ಕುರುತೇ । ಯತ್ಪುಣ್ಯಂ ನಕ್ಷತ್ರಂ । ತದ್ಬಟ್ಕುರ್ವೀತೋಪವ್ಯುಷಂ ।

ಯದಾವೈಸೂರ್ಯ ಉದೇತಿ । ಅಥ ನಕ್ಷತ್ರಂ ನೈತಿ । ಯಾವತಿ ತತ್ರ ಸೂರ್ಯೋ ಗಚ್ಛೇತ್ । ಯತ್ರ ಜಘನ್ಯಂ ಪಶ್ಯೇತ್ । ತಾವತಿ ಕುರ್ವೀತ ಯತ್ಕಾರೀಸ್ಯಾತ್ । ಪುಣ್ಯಾಹ ಏವ ಕುರುತೇ ॥

**ಓಂ ಪುಣ್ಯಾಹಂ ಭವಂತೋ ಬ್ರುವಂತು ॥**
**ಓಂ ಪುಣ್ಯಾಹಂ ॥**

(ಈ ಮೇಲಿನ ಮನ್ತ್ರದಲ್ಲಿ ಮೊದಲನೆಯದನ್ನು ಯಜಮಾನನೂ ಎರಡನೆಯದನ್ನು ಬ್ರಾಹ್ಮಣರೂ ಮೂರಾವರ್ತಿ ಗಟ್ಟಿಯಾಗಿ ಹೇಳಬೇಕು)

ಸ್ವಸ್ತಯೇ ವಾಯುಮುಪಬ್ರವಾಮಹೈಸೋಮಂ ಸ್ವಸ್ತಿ ಭುವನಸ್ಯ ಯಸ್ಪತಿಃ । ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವಂತು ನಃ । ಆದಿತ್ಯ ಉದಯನೀಯಃ ಪಥ್ಯಯೈ ವೇತಃ ಸ್ವಸ್ತ್ಯಾ ಪ್ರಯಂತಿ ಪಥ್ಯಾಂ ಸ್ವಸ್ತಿಮಭ್ಯುದ್ಯಂತಿ ಸ್ವಸ್ತ್ಯೈವೇತಃ ಪ್ರಯಂತಿ ಸ್ವಸ್ತ್ಯುದ್ಯಂತಿ । ಸ್ವಸ್ತ್ಯುದ್ಯಂತಿ । ಸ್ವಸ್ತಿನ ಇಂದ್ರೋ ವೃದ್ಧ ಶ್ರವಾಃ । ಸ್ವಸ್ತಿನಃ ಪೂಷಾ ವಿಶ್ವವೇದಾಃ । ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿನೋ ಬೃಹಸ್ಪತಿರ್ದಧಾತು । ಅಷ್ಟೌ ದೇವಾ ವಸವಸ್ಸೋಮ್ಯಾಸಃ । ಚತಸ್ರೋ

ದೇವೀ ರಜರಾಶ್ರವಿಷ್ಠಾಃ । ತೇ ಯಜ್ಞಂಪಾಂತು ರಜಸಃ ಪರಸ್ತಾತ್ ।

ಸಂವತ್ಸರೀಣಮಮೃತಗ್‌ಂ ಸ್ವಸ್ತಿ ॥

(ಯಜಮಾನ) **ಮಹ್ಯಂ ಸಕುಟುಂಬಾಯ ಶುದ್ಧಿ ಕರ್ಮಣೇ ಮಹಾಜನಾನ್ ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷ ಮಾಣಾಯ ಆಯುಷ್ಮತೇ ಸ್ವಸ್ತಿ ಭವಂತೋ ಬ್ರುವಂತು ॥**

(ಬ್ರಾಹ್ಮಣರು) **ಆಯುಷ್ಮತೇ ಸ್ವಸ್ತಿ ॥**

(ಈ ರೀತಿಯಾಗಿ 3 ಬಾರಿ ಪ್ರಾರ್ಥಿಸಿ ಆಶೀರ್ವಚನ ಪಡೆಯಬೇಕು)

ಋಧ್ಯಾಮಸ್ತೋಮಂ ಸನುಯಾಮ ವಾಜಮಾನೋ ಮಂತ್ರಂ

ಸರಥೇ ಹೋಪಯಾತಂ । ಯಶೋ ನ ಪಕ್ವಂ ಮಧು ಘೋಷ್ವಂತರಾ

ಭೂತಾಂಶೋ ಅಶ್ವಿನೋಃ ಕಾಮಮಪ್ರಾಃ ॥

**ಸರ್ವಾಮೃದ್ಧಿ ಮೃಧ್ನುಯಾಮಿತಿ ತಂ ವೈತೇಜಸ್ಸೈವ ಪುರಸ್ತಾತ್ಪರ್ಯ ಭವಚ್ಛಂದೋಭಿರ್ಯಧ್ಯತೋಕ್ಷರೈಃ ಉಪರಿಷ್ಟಾದ್ಗಾಯತ್ರ್ಯಾಃ ಸರ್ವತೋ ದ್ವಾದಶಾಹಂ ಪರಿಭೂಯಾತ್ಸರ್ವಾಮೃದ್ಧಿ ಮಾರ್ಧ್ನೋತ್ಸರ್ವಾಮೃದ್ಧಿ ಮೃಧ್ನೋತಿ ಯ ಏವಂ ವೇದ ॥**

ಋಧ್ಯಾಸ್ಮ ಹವ್ಯೈರ್ನಮಸೋಪಸದ್ಯ । ಮಿತ್ರಂ ದೇವಂ ಮಿತ್ರ ದೇಯಂ ನೋ ಅಸ್ತು । ಅನೂರಾಧಾನ್, ಹವಿಷಾ ವರ್ಧಯಂತಃ । ಶತಂ ಜೀವೇಮ ಶರದಸ್ಸವೀರಾಃ ॥

ತ್ರೀಣಿ ತ್ರೀಣಿ ವೈ ದೇವಾನಾಮೃದ್ಧಾನಿ । ತ್ರೀಣಿ ಛಂದಾಗ್ಂಸಿ । ತ್ರೀಣಿ ಸವನಾನಿ । ತ್ರಯ ಇಮೇ ಲೋಕಾಃ । ಋಧ್ಯಾಮೇವ ತದ್ವೀರ್ಯ ಏಷು ಲೋಕೇಷು ಪ್ರತಿತಿಷ್ಠತಿ ॥

(ಯಜಮಾನ) **ಮಹ್ಯಂ ಸಕುಟುಂಬಾಯ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಆದ್ಯ ಕರಿಷ್ಯಮಾಣಃ ....** (ಕರ್ಮ ಉದ್ದಿಶ್ಯವನ್ನು ಹೇಳಿ) **ಕರ್ಮಣಃ ಋದ್ಧಿಂ ಭವಂತೋ ಬ್ರುವಂತು ॥**

(ಬ್ರಾಹ್ಮಣರು) **ಓಂ ಕರ್ಮ ಋಧ್ಯತಾಂ ॥**

(ಈ ರೀತಿಯಾಗಿ ಮೂರು ಬಾರಿ ಪ್ರಾರ್ಥಿಸಿ ಆಶೀರ್ವಚನ ಪಡೆಯಬೇಕು)

(ಉತ್ತರದ ಕಲಶವನ್ನು ಬಲಕೈಯಲ್ಲಿಯೂ ದಕ್ಷಿಣದ ಕಲಶವನ್ನು ಎಡಕೈಯಲ್ಲಿಯೂ ಅವುಗಳ ಸ್ಥಾನ ಬದಲಿಸದಂತೆ ಹಿಡಿದುಕೊಂಡು ಕೆಳಗಿನ ಮನ್ತ್ರವನ್ನು ಹೇಳುತ್ತಾ ಅರ್ಘ್ಯಪಾತ್ರೆಗೆ ಎರಡರಿಂದಲೂ ಸ್ವಲ್ಪ ಸ್ವಲ್ಪವಾಗಿ ನೀರನ್ನು ಬಿಡಬೇಕು)

**ಋದ್ಧಿಂ ಭವಂತೋ ಬ್ರುವಂತು ।**

**ಋಧ್ಯತಾಮೃದ್ಧಿಃ ಸಮೃದ್ಧಿಃ ।**

ವರ್ಷಶತ ಸಂಪೂರ್ಣಮಸ್ತು ।

ಗೋತ್ರಾಭಿವೃದ್ಧಿರಸ್ತು ।

ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು ।

ಶುಭಗ್ಂ ಶುಭಮಸ್ತು ।

ಪುನರಪಿ ಗೋಬ್ರಾಹ್ಮಣೇಭ್ಯಶ್ಶುಭಂ ಭವತು । ಭಗವಾನ್ ವಾಸ್ತೋಷ್ಪತಿಃ ಪ್ರೀಯಂತಾಮಿತಿ ಭವಂತೋ ಬ್ರುವಂತು । ಭಗವಾನ್ ವಾಸ್ತೋಷ್ಪತಿಃ ಪ್ರೀಯತಾಂ ।

(ನಂತರ ಎರಡೂ ಕಲಶಗಳನ್ನು ಅವುಗಳ ಸ್ವಸ್ಥಾನದಲ್ಲಿರಿಸಬೇಕು. ಎರಡೂ ಕಲಶಗಳ ನೀರನ್ನು ಪರಸ್ಪರ ಬೆರೆಸಬೇಕು)

ಶುಚೀವೋ ಹವ್ಯಾಮರುತಶ್ಶುಚೀನಾಗ್ಂ ಶುಚಗ್ಂ ಹಿನೋಮ್ಯಧ್ವರ್ಯಗ್ಂ ಶುಚಿಭ್ಯಃ । ಋತೇನ ಸತ್ಯಾಽಮೃತ ಸಾಪ ಆಯಂ ಶುಚಿ ಜನ್ಮಾನಶ್ಶುಚಯಃ ಪಾವಕಾಃ । ಅಗ್ನಿಶ್ಶುಚಿ ವ್ರತತಮಶ್ಶುಚಿರ್ವಿಪ್ರಶ್ಶುಚಿಃ ಕವಿಃ । ಶುಚೀ ರೋಚತ ಆಹುತಃ । ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್ಂಷ್ಯರ್ಚಯಃ । ಬ್ರಾಹ್ಮಣೇಶ್ವಮೃತಗ್ಂ ಹಿತಂ । ಯೇನ ದೇವಾಃ ಪವಿತ್ರೇಣ । ಆತ್ಮಾನಂ ಪುನತೇ ಸದಾಂ । ತೇನ ಸಹಸ್ರ ಧಾರೇಣ । ಪಾವಮಾನ್ಯಃ ಪುನಂತು ಮಾ । ಪ್ರಾಜಾಪತ್ಯಂ ಪವಿತ್ರಂ ॥ ಶತ್ಯೋದ್ಯಾಮಗ್ಂ ಹಿರಣ್ಮಯಂ । ತೇನ

ಬ್ರಹ್ಮ ವಿದೋವಯಂ । ಪೂತಂ ಬ್ರಹ್ಮ ಪುನೀಮಹೇ । ಇಂದ್ರಸ್ಸುನೀತೀ ಸಹ ಮಾಪುನಾತು । ಸೋಮಸ್ಸ್ವಸ್ತ್ಯಾ ವರುಣಸ್ಸಮೀಚ್ಯಾ । ಯಮೋ ರಾಜಾ ಪ್ರಮೃಣಾಭಿಃ ಪುನಾತು ಮಾ । ಜಾತವೇದಾ ಮಾರ್ಜಯಂತ್ಯಾ ಪುನಾತು ॥

(ಈ ಕೆಳಗಿನ ಮನ್ತ್ರಗಳಿಂದ ನಾಲ್ಕು ದಿಕ್ಕು ಹಾಗೂ ಊರ್ಧ್ವ ದಿಕ್ಕಿಗೆ ಕಲಶದ ನೀರನ್ನು ಪ್ರೋಕ್ಷಿಸಬೇಕು)

(ಪೂರ್ವ) ಪ್ರಾಚ್ಯಾಂ ದಿಶಿ ದೇವಾ ಋತ್ವಿಜೋ ಮಾರ್ಜಯಂತಾಂ ॥

(ದಕ್ಷಿಣ) ದಕ್ಷಿಣಾಯಾಂ ದಿಶಿ ಮಾಸಾಃ ಪಿತರೋ ಮಾರ್ಜಯಂತಾಂ ॥

**ಅಪ ಉಪಸ್ಪೃಶ್ಯ ॥** (ಕೈ ತೊಳೆಯುವುದು)

(ಪಶ್ಚಿಮ) ಪ್ರತೀಚ್ಯಾಂ ದಿಶಿ ಗೃಹಾಃ ಪಶವೋ ಮಾರ್ಜಯಂತಾಂ ॥

(ಉತ್ತರ) ಉದೀಚ್ಯಾಂ ದಿಶಿ ಆಪ ಓಷಧಯೋ ವನಸ್ಪತಯೋ ಮಾರ್ಜಯಂತಾಂ ॥

(ಮೇಲಕ್ಕೆ) ಊರ್ಧ್ವಾಯಾಂ ದಿಶಿ ಯಜ್ಞ ಸಂವತ್ಸರೋ ಯಜ್ಞಪತಿರ್ಮಾರ್ಜಯಂತಾಂ ॥

(ಈ ಕೆಳಗಿನ ಮನ್ತ್ರಗಳಿಂದ ಯಜಮಾನನಿಗೆ ಹಾಗೂ ಉಳಿದವರಿಗೆ ಬ್ರಾಹ್ಮಣರು ಕಲಶೋದಕವನ್ನು ಪ್ರೋಕ್ಷಿಸಬೇಕು)

ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾನ್ಸ್ವಾವೇಶೋ ಅನಮೀವೋ ಭವಾನಃ । ಯತ್ವೇ ಮಹೇ ಪ್ರತಿ ತನ್ನೋ ಜುಷಸ್ವ ಶಂ ನ ಏಧಿ ದ್ವಿಪದೇ ಶಂ ಚತುಷ್ಪದೇ ॥

ವಾಸ್ತೋಷ್ಪತೇ ಶಗ್ಮಯಾ ಸಗ್ಂ ಸದಾತೇ ಸಕ್ಷೀಮ ಹಿರಣ್ವಯಾಗಾತುಮತ್ಯಾ । ಆವಹ, ಕ್ಷೇಮ ಉತಯೋ ನೇ ವರಂನೋ ಯೂಯಂ ಪಾತಸ್ಸ್ವಸ್ತಿಭಿಸ್ಸದಾನಃ ॥

ವಾಸ್ತೋಷ್ಪತೇ ಪ್ರತರಣೋನ ಏಧಿ ಗೋಭಿರಶ್ವೇಭಿರಿಂದೋ ॥

ಅಜರಾಸಸ್ತೇ ಸಖ್ಯೇ ಸ್ಯಾಮ ಪಿತೇವ ಪುತ್ರಾನ್ ಪ್ರತಿನೋ ಜುಷಸ್ವ ॥ ಅಮೀವಹಾ ವಾಸ್ತೋಷ್ಪತೇ ವಿಶ್ವಾರೂಪಾಣ್ಯಾ ವಿಶನ್ । ಸಖಾ ಸುಶೇವ ಏಧಿನಃ ॥

ಶುಭಗ್ಂ ಶುಭಂ ॥

ಸ್ವಸ್ತಿ ಪುಣ್ಯಾಹವಾಚನ ಸಮೃದ್ಧಿರಸ್ತು ॥ ಸರ್ವಾಣಿ ದ್ರವ್ಯಾಣಿ ಪ್ರೋಕ್ಷ್ಯ ॥

(ತೀರ್ಥವನ್ನು ತೆಗೆದುಕೊಳ್ಳುವುದು)

॥ ಓಂ ಶ್ರೀ ಗಣೇಶಾರ್ಪಣಮಸ್ತು ॥

# ಪಾತ್ರಾ ಸಾಧನಗಳು

1. 108 ಉದ್ದನೆ ದರ್ಭೆಗಳು.
2. 21 ಸಮಿತ್ತುಗಳು ಇಧ್ಮಕ್ಕೆ
   (ಮುತ್ತುಗ ಅಥವಾ ಅರಳಿ)
3. ಮೂರು ಚಿಕ್ಕ ಬಟ್ಟಲುಗಳು
   ಅ. ನೀರಿಗೆ ಆ. ಪ್ರೋಕ್ಷಣೆಗೆ
   ಇ. ಪೂರ್ಣ ಪಾತ್ರೆಗೆ
4. ಒಂದು ದೊಡ್ಡ ಬಟ್ಟಲು -
   ಆಜ್ಯಸ್ಥಾಲಿಗೆ
5. ಸೃಕ್ ಮತ್ತು ಸ್ರುವ
6. ಅಕ್ಕಿಹಿಟ್ಟು (ಒಂದು ಬಟ್ಟಲಿನಷ್ಟು)
7. ಮಂಗಳದ್ರವ್ಯ ಮತ್ತು ಹೋಮದ್ರವ್ಯಗಳು

:: – ::

# ಪಾತ್ರಾಸಾಧನಗಳ ಚಿತ್ರ

1. ದರ್ಭೆ



2. ಸಮಿತ್ತು



3. ಚಿಕ್ಕ ಬಟ್ಟಲು



4. ದೊಡ್ಡ ಬಟ್ಟಲು



5. ಸೃಕ್



ಸ್ರುವ



6. ಅಕ್ಕಿಹಿಟ್ಟು



1. ಸಂಕಲ್ಪ

ಓಂ ಭೂಃ ..... ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ತಿಥೌ । ಮಮ ಉಪಾತ್ತ (ಅಸ್ಮಾಕಂ ಸಹ ಕುಟುಂಬಾನಾಂ) ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರಮುದ್ದಿಶ್ಯ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಶ್ರೀ ..... ದೇವತಾಮುದ್ದಿಶ್ಯ ಶ್ರೀ ..... ದೇವತಾಪ್ರೀತ್ಯರ್ಥಂ ಶ್ರೀ ..... ದೇವತಾ ಹೋಮಾಖ್ಯಂ ಕರಿಷ್ಯೇ ॥

2. ತದಂಗ ಸ್ಥಂಡಿಲೋಲ್ಲೇಖನಾದ್ಯಗ್ನಿ ಪ್ರತಿಷ್ಠಾಪನಂ ಕರಿಷ್ಯೇ । ಶುಚೌ ದೇಶೇ ಸ್ಥಂಡಿಲಂ ಚತುರಶ್ರಂ ಕೃತ್ವಾ । ಉಪಲಿಪ್ಯ ॥

3. ಅಂಗುಷ್ಠ ಅನಾಮಿಕಾಭ್ಯಾಂ ಸಂಗೃಹೀತೇನ ಶಕಲೇನ ಸ್ಥಂಡಿಲಸ್ಯೋಪರಿ ದಕ್ಷಿಣತ ಆರಭ್ಯಂ ಉದಕ್‌ಸಂಸ್ಥಾಃ ತಿಸ್ರೋರೇಖಾ ಲಿಖಿತ್ವಾ । ತಾಸ್ವೇವ ರೇಖಾಸು ಪಶ್ಚಿಮತ ಆರಭ್ಯ ಪುರಸ್ಸಂಸ್ಥಾಃ ಉದೀಚಿಸ್ತಿಸ್ರೋರೇಖಾ ಲಿಖಿತ್ವಾ । ತತ್ರ ತಂ ನ್ಯಸ್ಯ ॥



1. ಇಷ್ಟದೇವತಾ ಉದ್ದಿಶ್ಯ ಕಲಶ ಸ್ಥಾಪನೆ, ಜಪ, ಪ್ರಾಣಪ್ರತಿಷ್ಠಾಪನೆಯನ್ನು ಮಾಡಿ ಹೋಮಕ್ಕೆ ಸಂಕಲ್ಪ ಮಾಬೇಕು.

2. ಶುಚಿಯಾದ ಸ್ಥಳದಲ್ಲಿ ಗೋಮಯದಿಂದ ಸಾರಿಸಿದ ಹೋಮಕುಂಡವನ್ನು ಸಿದ್ಧಗೊಳಿಸಿ ಅದರ ಮಧ್ಯದಲ್ಲಿ ಅಕ್ಕಿಹಿಟ್ಟಿನಿಂದ ಚೌಕಾಕಾರ ಮಂಡಲವನ್ನು ರಚಿಸಬೇಕು. ನಂತರ ಅಗ್ನಿ ಪ್ರತಿಷ್ಠಾಪನಾ ಕಾರ್ಯವನ್ನು ಪ್ರಾರಂಭಿಸಬೇಕು.

3. ಒಂದು ಉದ್ದವಾದ ಸಮಿತ್ತನ್ನು ತೆಗೆದುಕೊಂಡು ಅದನ್ನು ಅಂಗುಷ್ಠ ಅನಾಮಿಕಗಳಿಂದ ಹಿಡಿದುಕೊಂಡು ಸ್ಥಂಡಿಲದ ಮೇಲೆ ಚಿತ್ರದಲ್ಲಿ ತೋರಿಸಿರುವಂತೆ ಆರು (6) ಗೆರೆಗಳನ್ನು ಎಳೆಯಬೇಕು.

ದಕ್ಷಿಣದಿಂದ ಆರಂಭಿಸಿ
ಪಶ್ಚಿಮದಿಂದ ಪೂರ್ವಕ್ಕೆ 3
ಪಶ್ಚಿಮದಿಂದ ಆರಂಭಿಸಿ
ದಕ್ಷಿಣದಿಂದ ಉತ್ತರಕ್ಕೆ 3

ಆಮೇಲೆ ಆ ಸಮಿತ್ತನ್ನು ಸ್ಥಂಡಿಲದ ಮೇಲೆ ಇಡುವುದು. (ಸಮಿತ್ತಿನ ಬದಲು ದರ್ಭೆಯನ್ನು ಉಪಯೋಗಿಸಬಹುದು)

4. ಅವಾಚೀನೇನ ಪಾಣಿನಾದ್ಭಿರವೋಕ್ಷ್ಯ । ಶಕಲಮಾಗ್ನೇಯಾಂ ನಿರಸ್ಯ ॥
ಅಪ ಉಪಸ್ಪೃಶ್ಯ ॥

5. ''ಭೂರ್ಭುವಸ್ಸುವರೋಂ'' ಇತ್ಯಗ್ನಿಂ ಪ್ರತಿಷ್ಠಾಪ್ಯ ॥

6. ಅವೋಕ್ಷಣ ಶೇಷತೋಯಂ ಪ್ರಾಕ್ ಉದಗ್ವಾ । ಉತ್ಸಿಚ್ಯ ॥

7. ಅನ್ಯದುದಕಮಾನೀಯ ಯಥಾ ಪರಿಸ್ತರಣಾದ್ಬಹಿಃ ಪ್ರಾಗುದಗ್ವಾ ನಿದಧ್ಯಾತ್ ॥

8. ಅಗ್ನ್ಯಾನಯನ ಪಾತ್ರಯೋಃ ಅಕ್ಷತೋದಕಂ ನಿನೀಯ ॥

9. ಅಗ್ನಿಮಿಧ್ವಾ ॥

10. ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಗ್‍ಂ ಆವಿವೇಶ ॥
ಅಗ್ನಿಂ ಧ್ಯಾಯಾಮಿ ॥

4. ಒಂದು ಪಾತ್ರೆಯಲ್ಲಿ (ಬಟ್ಟಲು) ನೀರನ್ನು ತೆಗೆದುಕೊಂಡು ಸ್ಥಂಡಿಲವನ್ನು ಪ್ರೋಕ್ಷಿಸಬೇಕು. ನಂತರ ಸ್ಥಂಡಿಲದ ಮೇಲಿನ ಸಮಿತ್ತನ್ನು ಮುರಿದು ಆಗ್ನೇಯ ದಿಕ್ಕಿನಲ್ಲಿ ಹಾಕಬೇಕು. ಕಲಶದಲ್ಲಿನ ನೀರಿನಿಂದ ಕೈ ತೊಳೆಯಬೇಕು.

5. ಹಿತ್ತಾಳೆ ತಟ್ಟೆಯಲ್ಲಿ ಮುತ್ತೈದೆಯರಿಂದ ಅಗ್ನಿಯನ್ನು ತರಿಸಿಕೊಂಡು ಸ್ಥಂಡಿಲದ ಮೇಲೆ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ಅನ್ಯ ಪಕ್ಷದಲ್ಲಿ ಹಿತ್ತಾಳೆ ತಟ್ಟೆಯಲ್ಲಿ (ಹಲಗಾರತಿಯಾದರೂ ಸರಿ) ಕರ್ಪೂರ, ಬತ್ತಿಯಿಂದ ಯಜ್ಞೇಶ್ವರನನ್ನು ಮಾಡಿ ಹೋಮಕುಂಡಲಕ್ಕೆ ಹಾಕಿ ಅಗ್ನಿಯನ್ನು ಪ್ರಜ್ವಲಿಸಬೇಕು. ಅಗ್ನಿಯನ್ನು ಬಾಯಿನಿಂದ ಊದಬಾರದು.

6. ಪ್ರೋಕ್ಷಣೆಗೆ ಉಪಯೋಗಿಸಿದ ಉಳಿದ ನೀರನ್ನು ಪೂರ್ವ ದಿಕ್ಕಿನಲ್ಲಿ ಚೆಲ್ಲಬೇಕು.

7. ಬೇರೆ ಒಂದು ಪಾತ್ರೆಯಲ್ಲಿ ನೀರನ್ನು ಪೂರ್ವ/ ಈಶಾನ್ಯ ದಿಕ್ಕಿನಲ್ಲಿ ಇಡಬೇಕು. ಆ ನೀರನ್ನು ಯಾವುದಕ್ಕೂ ಉಪಯೋಗಿಸಬಾರದು.

8. ಅಗ್ನಿಯನ್ನು ತಂದ ಪಾತ್ರೆಗೆ ಅಕ್ಷತೆ ನೀರನ್ನು ಹಾಕಬೇಕು.

9. ಅಗ್ನಿಯನ್ನು ಪ್ರಜ್ವಲಿಸುವುದು.

10. ಈ ಮನ್ತ್ರದಿಂದ ಅಗ್ನಿಯನ್ನು ಧ್ಯಾನ ಮಾಡುವುದು.

11. ಏಷ ಹಿ ದೇವಃ ಪ್ರದಿಶೋನುಸರ್ವಾಃ ಪೂರ್ವೋ ಹಿ ಜಾತಸ್ಸಉಗರ್ಭೇ ಅಂತಃ । ಸವಿಜಾಯಮಾನಸ್ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋ ಮುಖಃ ॥ ಹೇ ಅಗ್ನೇ ಪ್ರಾಙ್ಮುಖೋ ಭವ । ಮಮ ಅಭಿಸಂಮುಖೋ ಭವ ॥

12. ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್

॥ ಪ್ರಾಗಾದಿ ಪರಿಮೃಜ್ಯ ॥

13. ಅಲಂಕೃತ್ಯ । ಅಗ್ನಯೇ ನಮಃ । ಜಾತವೇದಸೇ ನಮಃ । ಸಹೋಜಸೇ ನಮಃ । ಅಜಿರಾಪ್ರಭವೇ ನಮಃ । ವೈಶ್ವಾನರಾಯ ನಮಃ । ನರ್ಯಾಪಸೇ ನಮಃ । ಪಙ್ಕ್ತಿರಾಧಸೇ ನಮಃ । ವಿಸರ್ಪಿಣೇ ನಮಃ । ಮಧ್ಯೇ ಶ್ರೀ ಯಜ್ಞಪುರುಷಾಯ ನಮಃ ॥

14. ಪರಿಸ್ತೀರ್ಯ - ಪ್ರಾಗಾದಿ ಪ್ರದಕ್ಷಿಣಾಕಾರಂ ಅಗ್ನಿ ಪರಿಸ್ತೃಣಾತಿ ॥

11. ಈ ಮನ್ತ್ರದಿಂದ ಅಗ್ನಿಯನ್ನು ಎರಡಾವರ್ತಿ ಪೂರ್ವದಿಂದ ನಮ್ಮ ಕಡೆಗೆ ಎರಡು ಕೈಗಳಿಂದ ಬೀಸಿಕೊಂಡು ಅಗ್ನಿಯು ನಮ್ಮ ಕಡೆಗೆ ತಿರುಗಿದಂತೆ (ಅಭಿಮುಖವಾದಂತೆ) ಭಾವಿಸುವುದು.

12. ಈ ಮನ್ತ್ರದಿಂದ ಕಿರು ಬೆರಳನ್ನು ಬಿಟ್ಟು ಮಿಕ್ಕ ಮೂರು ಬೆರಳುಗಳಿಂದ ಪಂಚಪಾತ್ರೆಯ ನೀರನ್ನು ಸ್ಥಂಡಿಲದ ಸುತ್ತ ಪೂರ್ವದಿಂದ ಪ್ರದಕ್ಷಿಣಾಕಾರವಾಗಿ ಹಾಕಬೇಕು.

13. ಹೂವು, ಅಕ್ಷತೆಗಳಿಂದ ಪೂರ್ವದಿಕ್ಕಿನಿಂದ ಪ್ರಾರಂಭಿಸಿ ಹೋಮಕುಂಡದ 8 ದಿಕ್ಕುಗಳಿಗೆ ಮತ್ತು ಮಧ್ಯದಲ್ಲಿ ಯಜ್ಞೇಶ್ವರನಿಗೆ ಅರ್ಚನೆಯನ್ನು ಮಾಡಬೇಕು.

14. ಹೋಮಕುಂಡದ ಪೂರ್ವ ದಿಕ್ಕಿನಿಂದ ಪ್ರದಕ್ಷಿಣಾಕಾರವಾಗಿ ಪ್ರಾರಂಭಿಸಿ -




ಪ್ರಾಚ್ಯಾಮುದಗಗ್ರೈಃ ।
ದಕ್ಷಿಣಸ್ಯಾಂ ಪ್ರಾಗಗ್ರೈಃ ।
ಪ್ರತೀಚ್ಯಾಮುದಗಗ್ರೈಃ ।
ಉತ್ತರಸ್ಯಾಂ ಪ್ರಾಗಗ್ರೈಃ ।

15. ಉತ್ತರೇಣಾಗ್ನಿಂ ಪ್ರಾಗಗ್ರಾನ್ ದ್ವಾದಶ ದರ್ಭಾನ್ಸಗ್ಗಸ್ತೀರ್ಯ । ದರ್ವಾಜ್ಯಸ್ಥಾಲ್ಯಾ । ಪ್ರೋಕ್ಷಣ ಪೂರ್ಣಪಾತ್ರೇ । ಇಧ್ಮಸ್ರುವಾವಿತಿ ॥

(ದಕ್ಷಿಣ ವಾಮಹಸ್ತಾಭ್ಯಾಮಾದಾಯ)




1. ದರ್ವಿ (ಸ್ರುಕ್)
2. ಆಜ್ಯಸ್ಥಾಲಿ
3. ಪ್ರೋಕ್ಷಣೆ
4. ಪೂರ್ಣಪಾತ್ರೆ
5. ಇಧ್ಮ
6. ಸ್ರುವ




16. ಪವಿತ್ರಮದ್ಭಿ ಸಂಮೃಜ್ಯ ॥

17. ಉತ್ಥಾನೇ ಪ್ರೋಕ್ಷಣ ಪಾತ್ರೇ ನಿಧಾಯ । ಪ್ರೋಕ್ಷ್ಯ ॥

ಪೂರ್ವದಲ್ಲಿ ಉತ್ತರಾಗ್ರವಾಗಿಯೂ
ದಕ್ಷಿಣದಲ್ಲಿ ಪೂರ್ವಾಗ್ರವಾಗಿಯೂ
ಪಶ್ಚಿಮದಲ್ಲಿ ಉತ್ತರಾಗ್ರವಾಗಿಯೂ
ಉತ್ತರದಲ್ಲಿ ಪೂರ್ವಾಗ್ರವಾಗಿಯೂ
16 ದರ್ಭೆಗಳನ್ನು (ಕನಿಷ್ಠ 4) ಇಡಬೇಕು.

15. ಉತ್ತರ ದಿಕ್ಕಿನಲ್ಲಿ ಪೂರ್ವಾಗ್ರಗಳಾಗಿ 12 ದರ್ಭೆಗಳನ್ನು ಹಾಸಿ ಅದರ ಮೇಲೆ ಬಲಗೈಯಿಂದ ಸೃಕ್ ಮತ್ತು ಎಡಗೈಯಿಂದದ ಆಜ್ಯಸ್ಥಾಲಿಯನ್ನೂ, ಬಲಗೈಯಿಂದ ಪ್ರೋಕ್ಷಣೆ ಮತ್ತು ಎಡಗೈಯಿಂದ ಪೂರ್ಣಪಾತ್ರೆಯನ್ನೂ ಬಲಗೈಯಿಂದ ಇಧ್ಮವನ್ನೂ (ಪ್ರಮಾಣಕ್ಕೆ ಸರಿಯಾಗಿ ಇರುವ 21 ಸಮಿತ್ತು ದರ್ಭೆಯಲ್ಲಿ ಕಟ್ಟಿರುವುದು) ಎಡಗೈಯಿಂದ ಸ್ರುವವನ್ನೂ ಏಕಕಾಲದಲ್ಲಿ (ಚಿತ್ರದಲ್ಲಿ ತೋರಿಸಿರುವಂತೆ ದರ್ಭೆಯ ಮೂಲದಿಂದ ದರ್ಭಾಗ್ರದ ಕಡೆಗೆ) ಜೋಡಿಸಿ ಇಡಬೇಕು.

16. ಎರಡು ಉದ್ದವಾದ ದರ್ಭೆಗಳನ್ನು ತೆಗೆದುಕೊಂಡು ಅವುಗಳ ಅಗ್ರಗಳನ್ನು ಜೋಡಿಸಿ ದರ್ಭೆಗಳನ್ನು ಸಮಪ್ರಮಾಣಕ್ಕೆ ಕತ್ತರಿಸಬೇಕು. (ಉಗುರಿನಿಂದ ಕತ್ತರಿಸಬಾರದು) ಅದನ್ನು ಕಲಶದ ನೀರಿನಲ್ಲಿ ಅದ್ದಿ ಪವಿತ್ರ ಮಾಡಿಕೊಳ್ಳುವುದು ನಂತರ ಆ ಪವಿತ್ರವನ್ನು ಕಲಶದ ನೀರಿನಿಂದ ಪ್ರೋಕ್ಷಿಸಬೇಕು. (ಕಲಶವೆಂದರೆ ಪಂಚಪಾತ್ರೆಯಲ್ಲಿನ ನೀರು)

17. ಪ್ರೋಕ್ಷಣ ಪಾತ್ರೆಯನ್ನು ಮೇಲುಮುಖ ಮಾಡಿ ಉತ್ತರಾಗ್ರವಾಗಿ ಪವಿತ್ರವನ್ನು ಇಡಬೇಕು. ನಂತರ ಕಲಶದ ನೀರಿನಿಂದ ಪ್ರೋಕ್ಷಿಸಬೇಕು.

18. ಅಪರೇಣಾಗ್ನಿಂ ಪವಿತ್ರಾಂತರ್ಹಿತೇ ಪಾತ್ರೇ ಆಪ ಆನೀಯ । ಉತ್ತಾನಯೋಃ ಹಸ್ತಯೋಃ ಅಂಗುಷ್ಠೋಪ ಕನಿಷ್ಠಿಕಾಭ್ಯಾಂ ಉದಗಗ್ರೇ ಗೃಹೀತ್ವಾ । ಪ್ರಾಚೀಸ್ತ್ರಿರುತ್ಪೂಯ ॥

19. ಪಾತ್ರಾಣ್ಯುತ್ತಾನಾನಿ ಕೃತ್ವಾ ॥

20. ಇಧ್ಮಂ ಚ ವಿಸ್ರಸ್ಯ ॥

21. ಸ ಪವಿತ್ರೇಣ ತ್ರಿಃ ಪ್ರೋಕ್ಷತಿ ॥

22. ತತ್ಪಾತ್ರಂ ದಕ್ಷಿಣತೋ ನಿಧಾಯ ॥

23. ತೇ ಪವಿತ್ರೇ ಪೂರ್ಣಪಾತ್ರೇ ನಿಧಾಯ । ಪ್ರೋಕ್ಷ್ಯ । ಅಪರೇಣಾಗ್ನಿಂ ಪವಿತ್ರಾಂತರ್‌ಹಿತೇ ಪೂರ್ಣಪಾತ್ರೇ ಆಪ ಆನೀಯ । ಉತ್ತಾನಯೋರ್ಹಸ್ತಯೋಃ ಅಂಗುಷ್ಠೋಪ ಕನಿಷ್ಠಿಕಾಭ್ಯಾಂ ಉದಗಗ್ರೇ ಗೃಹೀತ್ವಾ । ಪ್ರಾಚೀಸ್ತ್ರಿರುತ್ಪೂಯ । ದರ್ಭೇ ಸಹ ಮುಖ ಸಮಮುದ್ಧೃತ್ಯ ॥

''ಓಂ ಪ್ರಣಯ'' । ಉತ್ತರೇಣಾಗ್ನಿಂ ದ್ವಾದಶ ದರ್ಭೇಷು ಸಾದಯಿತ್ವಾ । ಅಷ್ಟಭಿಃ ದರ್ಭೈಃ ಪ್ರಚ್ಛಾದ್ಯ ॥

24. ಬ್ರಹ್ಮಾರ್ಥೇ ದಕ್ಷಿಣತೋಗ್ನೇಃ ಬ್ರಾಹ್ಮಣಂ ತ್ರಿಷು ದರ್ಭೇಷು ನಿಷಾದ್ಯ । (ತದಭಾವೇ ಬ್ರಹ್ಮಾಯತನೇ) ಅಸ್ಮಿನ್.....

18. ಪ್ರೋಕ್ಷಣ ಪಾತ್ರೆಗೆ ಸ್ವಲ್ಪ ನೀರು ಮತ್ತು ಅಕ್ಷತೆಯನ್ನು ಹಾಕಬೇಕು. ನಂತರ ಪಾತ್ರೆಯ ಮೇಲಿನ ಪವಿತ್ರವನ್ನು 2 ಕೈಗಳ ಅಂಗುಷ್ಠ ಕಿರುಬೆರಳುಗಳಿಂದ ಹಿಡಿದುಕೊಂಡು ಪಾತ್ರೆಯಲ್ಲಿರುವ ನೀರನ್ನು ಪಶ್ಚಿಮದಿಂದ ಪೂರ್ವಕ್ಕೆ (3) ಮೂರು ಸಾರಿ ಅರೆಯಬೇಕು.

19. ಉಳಿದ ಪಾತ್ರಾಸಾಧನಗಳನ್ನೂ ಮೇಲ್ಮುಖವಾಗಿ ಇಡುವುದು.

20. ಸಮಿತ್ತಿಗೆ ಕಟ್ಟಿರುವ ದರ್ಭೆಯ ಗಂಟನ್ನು ಬಿಚ್ಚುವುದು.

21. ಪ್ರೋಕ್ಷಣೆ ಪಾತ್ರೆಯಲ್ಲಿರುವ ನೀರಿನಿಂದ ಅದರ ಮೇಲಿರುವ ಪವಿತ್ರದಿಂದ ಉಳಿದ ಪಾತ್ರಾಸಾಧನಗಳ ಮೇಲೆ 3 ಬಾರಿ ಪ್ರೋಕ್ಷಿಸಬೇಕು.

22. ಪ್ರೋಕ್ಷಣ ಪಾತ್ರೆಯನ್ನು ಹೋಮಕುಂಡದ ದಕ್ಷಿಣಕ್ಕೆ (ಯಜಮಾನನ ಕೈಯಳತೆಯಲ್ಲಿ) ಇಡಬೇಕು.

23. ಪೂರ್ಣಪಾತ್ರೆಯ ಮೇಲೆ ಪವಿತ್ರವನ್ನು ಇಟ್ಟು ಪ್ರೋಕ್ಷಿಸಿ ಪಾತ್ರೆಗೆ ಸ್ವಲ್ಪ ನೀರು ಅಕ್ಷತೆಯನ್ನು ಹಾಕಬೇಕು. ಪಾತ್ರೆಯ ಮೇಲಿನ ಪವಿತ್ರವನ್ನು ಎರಡು ಕೈಗಳ ಅಂಗುಷ್ಠ - ಕಿರು ಬೆರಳುಗಳಿಂದ ಹಿಡಿದು ಪಾತ್ರೆಯಲ್ಲಿರುವ ನೀರನ್ನು ಪಶ್ಚಿಮದಿಂದ ಪೂರ್ವಕ್ಕೆ ಮೂರು ಸಾರಿ (3) ಅರೆಯಬೇಕು. ನಂತರ ಪವಿತ್ರ ಇರುವಂತೆಯೇ ಪಾತ್ರೆಯನ್ನು ಎಡಗೈಯಲ್ಲಿ ಇಟ್ಟುಕೊಂಡು ಬಲಗೈಯಿಂದ ಮುಚ್ಚಿ ಮೂಗಿನವರೆವಿಗೂ ಎತ್ತಿ ಹಿಡಿಯುವುದು.

'ಓಂ ಪ್ರಣಯ' ಎಂದು ಹೇಳಿ ಅಗ್ನಿಗೆ ಉತ್ತರದಲ್ಲಿ ಪಾತ್ರಾಸಾಧನ ದರ್ಭೆಗಳ ಪಕ್ಕದಲ್ಲಿ ಬೇರೆ 12 ದರ್ಭೆಗಳನ್ನು ಹಾಸಿ ಅದರ ಮೇಲೆ ಪಾತ್ರೆಯನ್ನು ಇಡಬೇಕು. ಪಾತ್ರೆಯ ಮೇಲಿನ ಪವಿತ್ರವನ್ನು ಬೇರೆ ತೆಗೆದಿಟ್ಟುಕೊಂಡು ಪಾತ್ರೆಯನ್ನು ಬೇರೆ 8 ದರ್ಭೆಗಳಿಂದ ಮುಚ್ಚಬೇಕು.

24. ಅಗ್ನಿಗೆ ದಕ್ಷಿಣ ದಿಕ್ಕಿನಲ್ಲಿ ವೇದವಿತ್ ಬ್ರಾಹ್ಮಣನನ್ನು (ಆ ದಿಕ್ಕಿನಲ್ಲಿರುವ ಯಮ ಮತ್ತು ಮೃತ್ಯುಗಳ ದೋಷವನ್ನು ನಿವಾರಿಸಲು) ಬ್ರಹ್ಮತ್ವಕ್ಕಾಗಿ ಕೂರಿಸಬೇಕು. ಉಕ್ತ ಬ್ರಾಹ್ಮಣನ ಅಭಾವದಲ್ಲಿ ಯಜ್ಞೋಪವೀತವನ್ನಾಗಲಿ ಅಥವಾ ಪೂರ್ವಾಗ್ರವಾಗಿ

ಹೋಮೇ ಕರ್ಮಣಿ ಬ್ರಹ್ಮತ್ವಂ ಕುರು । ಬ್ರಹ್ಮಾಣಂ ತ್ವಾಮಹಂ ವೃಣೇ ॥

25. ವೃತೋಽಸ್ಮಿ ಕರಿಷ್ಯಾಮಿ ॥

26. ಬ್ರಹ್ಮನ್ । ಬ್ರಹ್ಮಾಸಿ । ನಮಸ್ತೇ ಅಸ್ತು ಬ್ರಹ್ಮನ್ ಬ್ರಹ್ಮಣೇ । ಇತಿ ಬ್ರಹ್ಮಾಸನಂ ದತ್ವಾ ॥

27. ತೇ ಪವಿತ್ರೇ ಆಜ್ಯಪಾತ್ರೇ ನಿಧಾಯ ॥

28. ಆಜ್ಯಂ ವಿಲಾಪ್ಯ । ವಿಲೀನಮಪಿ ಅಗ್ನಾವಧಿಶ್ರಿತ್ಯ ॥

29. ಅಪರೇಣಾಗ್ನಿಂ - ಪರಿಸ್ತರಣಾತ್ ಬಹಿಃ ಪವಿತ್ರ ಅಂತರ್ಹಿತಾಯಾಂ ಆಜ್ಯಸ್ಥಾಲ್ಯಾಂ ಆಜ್ಯಂ ನಿರೂಪ್ಯ ।

30. ಪರಿಸ್ತರಣಾತ್ ಉದೀಚಃ ಅಂಗಾರಾನ್ ನಿರೂಹ್ಯ । ತೇಷ್ವಾಜ್ಯ ಪಾತ್ರೇಮಧಿಶ್ರಿತ್ಯ ॥

31. ಜ್ವಲತಾ ದರ್ಭೇನ ಅವದ್ಯೋತ್ಯ ॥

32. ದ್ವೇ ದರ್ಭಾಗ್ರೇ - ಪ್ರಚ್ಛಿದ್ಯ - ಪ್ರಕ್ಷಾಳ್ಯ - ಆಜ್ಯೇ ಪ್ರತ್ಯಸ್ಯ ॥

33. ಚರುಣಾ ಸಹ ತ್ರಿಃ ಪರ್ಯಗ್ನಿ ಕೃತ್ವಾ । ಉದಗುದ್ವಾಸ್ಯ ॥

ಕೂರ್ಚೆಯನ್ನಾಗಲಿ ಇಡಬೇಕು. ಬ್ರಹ್ಮಾರ್ಥಕ್ಕಾಗಿ 3 ದರ್ಭೆಗಳನ್ನು ಕೊಡಬೇಕು. ಬ್ರಹ್ಮತ್ವವನ್ನು ಒಪ್ಪಿಕೊಳ್ಳಬೇಕೆಂದು ಪ್ರಾರ್ಥಿಸಬೇಕು.

25. **'ಆಗಲಿ'** ಎಂದು ಬ್ರಹ್ಮತ್ವಕ್ಕೆ ಕುಳಿತಿರುವ ಬ್ರಾಹ್ಮಣನು ಹೇಳಬೇಕು.

26. ಬ್ರಹ್ಮನಿಗೆ ಆಸನವನ್ನು ಕೊಟ್ಟು ಕೈ ಹಿಡಿದು ಪ್ರಾರ್ಥಿಸಬೇಕು.

27. (ಹಿಂದೆ ತೆಗೆದಿಟ್ಟಂತಹ) ಪವಿತ್ರವನ್ನು ಆಜ್ಯಪಾತ್ರೆಯ ಮೇಲೆ ಇಡುವುದು.

28. ಬೇರೆ ಪಾತ್ರೆಯಲ್ಲಿ ಸಂಗ್ರಹಿಸಿರುವ ತುಪ್ಪವನ್ನು ಕರಗುವ ಹಾಗೆ ಅಗ್ನಿಯಲ್ಲಿ ಕಾಯಿಸಬೇಕು.

29. ಆಜ್ಯಪಾತ್ರೆಗೆ ಪವಿತ್ರವು ಅದರ ಮೇಲೆ ಇರುವಂತೆಯೇ ಕರಗಿದ ತುಪ್ಪವನ್ನು ಹಾಕಬೇಕು.

30. ಅಗ್ನಿಯ ಉತ್ತರ ಭಾಗದಿಂದ ಒಂದು ಕೆಂಡವನ್ನು ತೆಗೆದು ಆಜ್ಯಪಾತ್ರೆಯ ಪಕ್ಕದಲ್ಲಿಡಬೇಕು.

31. ಎರಡು ಉದ್ದವಾದ ದರ್ಭೆಯನ್ನು ಅಗ್ನಿಯಲ್ಲಿ ಹೊತ್ತಿಸಿ ಅದನ್ನು ಆಜ್ಯಪಾತ್ರೆಯಲ್ಲಿ ಅದ್ದಿ ಆಗ್ನೇಯ ದಿಕ್ಕಿನಲ್ಲಿ ಹಾಕಬೇಕು.

32. ಎರಡು ಉದ್ದವಾದ ದರ್ಭೆಯ ಅಗ್ರಗಳನ್ನು ಕತ್ತರಿಸಿ ದಕ್ಷಿಣ ದಿಕ್ಕಿನಲ್ಲಿರುವ ಪ್ರೋಕ್ಷಣ ಪಾತ್ರೆಯಲ್ಲಿರುವ ನೀರಿನಲ್ಲಿ ಅದ್ದಿ ಆಜ್ಯಪಾತ್ರೆಗೆ ಹಾಕಬೇಕು.

33. ಎರಡು ಉದ್ದವಾದ ದರ್ಭೆಯನ್ನು ಅಗ್ನಿಯಲ್ಲಿ ಹೊತ್ತಿಸಿ ಹೋಮಚರು ಮತ್ತು ಆಜ್ಯಪಾತ್ರೆಗೆ (ಪವಿತ್ರವು ಅದರ ಮೇಲಿರುವಂತೆಯೇ) ಮೂರು ಸಾರಿ (3)

ಆಜ್ಯಸ್ಥಾಲೀಂ ಅಗ್ನೇಃ ಪಶ್ಚಾನ್ನಿಧಾಯ ॥

34. ಅಂಗಾರಾನ್ನ್ರತ್ಯೂಹ್ಯ ॥

35. ಅಪರೇಣಾಗ್ನಿಂ ಉದಗಗ್ರಾಭ್ಯಾಂ - ಪವಿತ್ರಾಭ್ಯಾಂ ಪುನರಾಹಾರಮಾಜ್ಯಂ ತ್ರಿರುತ್ಪೂಯ ॥

36. ಪವಿತ್ರ ಗ್ರಂಥಿಂ ವಿಸ್ರಸ್ಯ ।
ಅಪಉಪಸ್ಪೃಶ್ಯ ।
ಪ್ರಾಗಗ್ರಮಗ್ನೌ ಪ್ರಹರತಿ ॥

37. ದರ್ಭೈಸ್ಸಹ । ಸ್ರುವಂ ದಕ್ಷಿಣ ಹಸ್ತೇನ ಸ್ರುಚಂ ವಾಮಹಸ್ತೇನ ಆದಾಯ ॥

38. ಸ್ರುಕ್ ಸ್ರುವಾಗ್ನೌ ಪ್ರತಿತಪ್ಯ ॥

39. ದರ್ಭೈಃ ಸಹೈವ ಸಂಮೃಜ್ಯ । ಅಗ್ರೈರಗ್ರಂ ಮೂಲೈರ್ಮೂಲಂ । ಪುನಃ ಪ್ರತಿತಪ್ಯ - ಪ್ರೋಕ್ಷ್ಯ - ನಿಧಾಯ ॥

40. ದರ್ಭಾನ್ ಅದ್ಭಿಃ - ಸಗ್ಂ ಸ್ಪೃಶ್ಯ - ಅಗ್ನೌ ಪ್ರಹರತಿ ॥

41. ಇಧ್ಮಮಾದಾಯ । ಪರಿಸ್ತರಣಾದಂತಃ ಪರಿಧೀನ್ ಪರಿದಧಾತಿ । ಪಶ್ಚಾತ್ ಉದಗಗ್ರಂ । ದಕ್ಷಿಣತಃ ಪ್ರಾಗಗ್ರಂ । ಉತ್ತರತಃ ಪ್ರಾಗಗ್ರಂ ॥

ಪ್ರದಕ್ಷಿಣೆಯಾಗಿ ಸುತ್ತಿಸಿ ವಿಸರ್ಜಿಸಬೇಕು. ನಂತರ ಯಜಮಾನನ ಮುಂದೆ ಉತ್ತರ ದಿಕ್ಕಿಗೆ ಬರುವಂತೆ (ಎಡಭಾಗಕ್ಕೆ) ಆಜ್ಯಪಾತ್ರೆಯನ್ನಿಡಬೇಕು.

34. ಅಗ್ನಿಯಿಂದ ತೆಗೆದಿದ್ದ ಕೆಂಡವನ್ನು ವಾಪಸ್ಸು ಅಗ್ನಿಯಲ್ಲಿ ಹಾಕಬೇಕು.

35. ಆಜ್ಯಪಾತ್ರೆಯ ಮೇಲೆ ಉತ್ತರಾಗ್ರವಾಗಿರುವ ಪವಿತ್ರದಿಂದ (ಆಜ್ಯ) ತುಪ್ಪವನ್ನು 3 ಸಾರಿ ಆರೆಯಬೇಕು.

36. ಆಜ್ಯಪಾತ್ರೆಯ ಮೇಲಿರುವ ಪವಿತ್ರದ ಗಂಟನ್ನು ಬಿಚ್ಚಿ ಪ್ರೋಕ್ಷಣೆಪಾತ್ರೆಯ ನೀರಿನಲ್ಲಿ ಪ್ರೋಕ್ಷಿಸಿ ಪೂರ್ವಾಗ್ರವಾಗಿ ಅಗ್ನಿಯಲ್ಲಿ ಹಾಕಬೇಕು.

37. ಎರಡು ಉದ್ದವಾದ ದರ್ಭೆ ಸಹಿತವಾಗಿ ಬಲಗೈಯಲ್ಲಿ ಸ್ರುವ ಮತ್ತು ಎಡಗೈಯಲ್ಲಿ ಸೃಕ್ಕನ್ನು ಹಿಡಿದುಕೊಳ್ಳಬೇಕು.

38. ಸೃಕ್, ಸ್ರುವಗಳನ್ನು ಅಗ್ನಿಯಲ್ಲಿ ಕಾಯಿಸುವುದು.

39. ಸೃಕ್ ಸ್ರುವಗಳ ಮೇಲು ಭಾಗವನ್ನು ದರ್ಭಾಗ್ರದಿಂದಲೂ ಕೆಳ ಭಾಗವನ್ನು ದರ್ಭೆಯ ಮೂಲದಿಂದಲೂ 2 ಬಾರಿ ಸವರಬೇಕು. ಪುನಃ ಅಗ್ನಿಯಲ್ಲಿ ಕಾಯಿಸಬೇಕು. ದರ್ಭೆಯಿಂದ ಪ್ರೋಕ್ಷಣೆಪಾತ್ರೆಯ ನೀರಿನಿಂದ ಅವನ್ನು ಪ್ರೋಕ್ಷಿಸಬೇಕು. ನಂತರ ಆಜ್ಯಪಾತ್ರೆಯ ಎಡಕ್ಕೆ ಸೃಕ್ ಮತ್ತು ಬಲಕ್ಕೆ ಸ್ರುವ ಬರುವಂತೆ ಇಡಬೇಕು.

40. ಸೃಕ್ ಸ್ರುವಗಳನ್ನು ಸವರಿ ಪ್ರೋಕ್ಷಿಸಲು ಉಪಯೋಗಿಸಿದ ದರ್ಭೆಯನ್ನು ಪ್ರೋಕ್ಷಣಪಾತ್ರೆಯ ನೀರಿನಲ್ಲಿ ಅದ್ದಿ ಪೂರ್ವಾಗ್ರವಾಗಿ ಅಗ್ನಿಯಲ್ಲಿ ಹಾಕಬೇಕು.

41. ಪಾತ್ರಾಸಾಧನಗಳ ಜೊತೆಯಲ್ಲಿಟ್ಟಿದ್ದ 21 ಸಮಿತ್ತುಗಳಲ್ಲಿ 3ನ್ನು ತೆಗೆದುಕೊಂಡು ಹೋಮಕುಂಡದ ಪಶ್ಚಿಮದಲ್ಲಿ ಉತ್ತರಾಗ್ರವಾಗಿಯೂ ದಕ್ಷಿಣ ಮತ್ತು ಉತ್ತರಗಳಲ್ಲಿ ಪೂರ್ವಾಗ್ರವಾಗಿಯೂ ಅವನ್ನು ಇಡಬೇಕು. (ಇವಕ್ಕೆ ಪರಿಧಿ ಎನ್ನುತ್ತಾರೆ)

42. ಸಮಿದ್ವಯಂ ಹಸ್ತೇನ ಮಧ್ಯಮ ಪರಿಧಿಮುಪಸ್ಪೃಶ್ಯ । ಪುರಸ್ತಾದೂರ್ಧ್ವೈಃ ಆಘಾರ ಸಮಿಧಾವಾದಧಾತಿ । ಆಗ್ನೇಯಂ ಯೇಕಾಮಿತರಾಮೀಶಾನ್ಯಂ ॥

43. ಅಗ್ನಿಂ ಪರಿಷಿಚ್ಯ ।

ಅದಿತೇನು ಮನ್ಯಸ್ವ ।

ಅನುಮತೇನು ಮನ್ಯಸ್ವ ।

ಸರಸ್ವತೇನು ಮನ್ಯಸ್ವ ।

ದೇವ ಸವಿತಃ ಪ್ರಸುವ ।

44. ಇಧ್ಮಮಲಂಕೃತ್ಯ । ಸ್ವಯಮಲಂಕೃತಃ । ಬ್ರಹ್ಮಾಣಮಲಂಕೃತ್ಯ ॥

45. ಇಧ್ಮಂ ದ್ವಿರಭಿಘಾರ್ಯ ।

ಮೂಲ ಮಧ್ಯಮಯೋಃ ಮಧ್ಯಭಾಗಂ ಗೃಹೀತ್ವಾ । ಆಸನಾತ್ಕಿಂಚಿದುತ್ಥಾಯ । ಅಸ್ಮಿನ್ ........ ಹೋಮ ಕರ್ಮಣಿ ಬ್ರಹ್ಮನ್ ಇಧ್ಮಮಾದಾಸ್ಯೇ । ಓಂ ಆಧಸ್ವ । (ಇತ್ಯನುಜ್ಞಾತ ಉಪವಿಶ್ಯ ।) ಪ್ರಜಾಪತಯ ಇದಂ ನಮಮ ।

42. ಎರಡು ಸಮಿತ್ತುಗಳನ್ನು ಎರಡೂ ಕೈಯಲ್ಲಿ ಹಿಡಿದು ಪಶ್ಚಿಮದಲ್ಲಿಟ್ಟಿರುವ ಸಮಿತ್ತಿಗೆ ಮುಟ್ಟಿಸಿ ಆಗ್ನೇಯ ಮತ್ತು ಈಶಾನ್ಯ ದಿಕ್ಕಿನಲ್ಲಿ ಪೂರ್ವಾಗ್ರವಾಗಿ ಇಡಬೇಕು. (ಇವನ್ನು ಆಘಾರ ಸಮಿತ್ತೆನ್ನುತ್ತಾರೆ)

43. ಅಗ್ನಿಗೆ ಪರಿಶೇಚನೆಯನ್ನು ಮಾಡಬೇಕು. ದಕ್ಷಿಣದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಪಶ್ಚಿಮದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಉತ್ತರದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹೋಮಕುಂಡಕ್ಕೆ ಎಡಭಾಗದಿಂದ ಸುತ್ತಲೂ ನೀರಿನಿಂದ ಪರಿಷೇಚಿಸಬೇಕು.

44. ಉಳಿದ 16 ಸಮಿತ್ತುಗಳಲ್ಲಿ ಒಂದನ್ನು ಬಿಟ್ಟು ಮಿಕ್ಕ 15 ಸಮಿತ್ತುಗಳನ್ನು ತೆಗೆದುಕೊಂಡು ಅವನ್ನು ಅಕ್ಷತೆಯಿಂದ ಅಲಂಕರಿಸಬೇಕು. ತಾನೂ ಅಕ್ಷತೆಯನ್ನು ತಲೆಯ ಮೇಲೆ ಹಾಕಿಕೊಂಡು ಬ್ರಹ್ಮನ ಮೇಲೂ ಅಕ್ಷತೆಯನ್ನು ಹಾಕಿ ಪೂಜಿಸಬೇಕು. (ಮಿಕ್ಕ ಒಂದು ಸಮಿತ್ತನ್ನು ರಜ್ಜುವಿನಿಂದ ಕಟ್ಟಿ ಹಾಗೆಯೇ ಇಟ್ಟಿರಬೇಕು)

45. ಸಮಿತ್ತುಗಳನ್ನು ಎರಡು ಸಲ ತುಪ್ಪದಿಂದ ಅಭಿಘಾರ ಮಾಡಿ ಅವುಗಳ ಮಧ್ಯ ಭಾಗದ ಸ್ವಲ್ಪ ಕೆಳಗೆ ಎರಡೂ ಕೈಗಳಿಂದ ಹಿಡಿದುಕೊಂಡು ಆಸನದಿಂದ ಸ್ವಲ್ಪ ಎದ್ದು ಹೋಮಕ್ಕೆ ಬ್ರಹ್ಮನ ಅನುಜ್ಞೆಯನ್ನು ಪಡೆದು ಅಗ್ನಿಗೆ ಸಮಿತ್ತುಗಳನ್ನು ಕುಳಿತುಕೊಂಡು ಹಾಕಬೇಕು.

ಇಧ್ಮ ಪ್ರಕ್ಷೇಪಣ ಮುಹೂರ್ತಃ ಸುಮುಹೂರ್ತೋಽಸ್ತ್ವಿತ್ಯನು ಗೃಹ್ಣಂತು । ಸುಮುಹೂರ್ತೋಽಸ್ತು ॥

46. ಆಘಾರ ಹೋಮಃ :-

ಅ) ವಾಯುವ್ಯಾದಾಗ್ನೇಯಾಂತಂ ಪ್ರಜಾಪತಯ ಇದಂ ನಮಮ ॥

ಆ) ನೈಋತ್ಯಾದೀಶಾನಾಂತಂ ಇಂದ್ರಾಯ ಇದಂ ನಮಮ ॥

47. ಅಗ್ನಯೇ ಸ್ವಾಹಾ ॥

ಉತ್ತರ ಪೂರ್ವದೇಶೇ ಅಗ್ನಯ ಇದಂ ನಮಮ ।

48. ಸೋಮಾಯ ಸ್ವಾಹಾ ॥

ದಕ್ಷಿಣಪೂರ್ವದೇಶೇ ಸೋಮಾಯ ಇದಂ ನಮಮ ॥

49. ಅಗ್ನಯೇ ಸ್ವಾಹಾ ॥

ಅಗ್ನಯ ಇದಂ ನಮಮ (ಮಧ್ಯಮಗ್ನೌ ಜುಹೋತಿ)

50. ಯಥೋಪದೇಶಂ ಪ್ರಧಾನಾಹುತೀರ್ಹುತ್ವಾ ॥

(ಹೂಯಮಾನಂ ದ್ರವ್ಯಜಾತಂ ಯಥಾ ದೈವತಂ ಅಸ್ತು)





ಇಧ್ಮಾದಾನ ಕರ್ಮವು ಸಾಂಗವಾಯಿತೆಂದು ಬ್ರಾಹ್ಮಣರು ಹೇಳುತ್ತಾರೆ.

ಪ್ರಜಾಪತಿಗೆ ಅರ್ಪಿಸುವೆನೆಂದು ಮನಸ್ಸಿನಲ್ಲಿ ಧ್ಯಾನಮಾಡಿ ಇಧ್ಮಾದಾನ ಮಾಡುವುದು.

46. ಸ್ರುವದಿಂದ ಸ್ರಕ್ಕಿಗೆ ತುಪ್ಪವನ್ನು ಹಾಕಿಕೊಂಡು ಆಜ್ಯವು ಧಾರೆಯಾಗಿ ಬೀಳುವಂತೆ,

ಅ) ಪ್ರಜಾಪತಿಯನ್ನು ಮನಸ್ಸಿನಲ್ಲಿ ಧ್ಯಾನಿಸಿ ವಾಯುವ್ಯದಿಂದ ಆಗ್ನೇಯ ದಿಕ್ಕಿಗೆ ಹೋಮ ಮಾಡಬೇಕು.

ಆ) ಇಂದ್ರನನ್ನು ಮನಸ್ಸಿನಲ್ಲಿ ಧ್ಯಾನಿಸಿ ನೈಋತ್ಯದಿಂದ ಈಶಾನ್ಯ ದಿಕ್ಕಿಗೆ ಹೋಮ ಮಾಡಬೇಕು.

47. ಈಶಾನ್ಯ ಮತ್ತು ಉತ್ತರ ದಿಕ್ಕಿನ ಮಧ್ಯ ಭಾಗದಲ್ಲಿ ಹೋಮ ಮಾಡಬೇಕು.

48. ಆಗ್ನೇಯ ಮತ್ತು ದಕ್ಷಿಣ ದಿಕ್ಕಿನ ಮಧ್ಯ ಭಾಗದಲ್ಲಿ ಹೋಮ ಮಾಡಬೇಕು.

49. ಅಗ್ನಿಯ ಮಧ್ಯದಲ್ಲಿ ಹೋಮ ಮಾಡಬೇಕು.

50. ಇನ್ನು ಮುಂದೆ ಯಥಾ ಸಂಕಲ್ಪದಂತೆ ಆವಾಹಿತ, ಪ್ರಧಾನ ದೇವತಾ ಮನ್ತ್ರಗಳಿಂದ ಹೋಮ ಮಾಡಬೇಕು.

(ಒಂದನೇ ಆಹುತಿಯ ನಂತರ ಸಮರ್ಪಣೆಯನ್ನು ಹೇಳಿ ನಂತರ ಈ ಮನ್ತ್ರದಿಂದ ಅಕ್ಷತೆ ನೀರನ್ನು ಹಾಕಬೇಕು. ಮುಂದಿನ ಮನ್ತ್ರಗಳಿಗೆ ಅದೇ ದೇವತೆಗೆ ಸಮರ್ಪಣೆ ಹೇಳಬೇಕಾಗಿಲ್ಲ)

**51. ಸ್ವಿಷ್ಟಕೃತ್ ಹೋಮಃ :-**

**ಸ್ರುಚ್ಯುಪಸ್ತೀರ್ಯ । ಚರೂಃ ಉತ್ತರಾರ್ಧಾತ್ ಸಕೃತ್ ಭೂಯಿಷ್ಠಮವಧಾಯ । ದ್ವಿರಭಿಘಾರ್ಯ ॥**

52. ಹವ್ಯವಾಹಮಭಿಮಾತಿಷಾಹಂ । ರಕ್ಷೋಹಣಂ ಪೃತನಾಸು ಜಿಷ್ಣುಂ । ಜ್ಯೋತಿಷ್ಮಂತಂ ದೀದ್ಯಂತಂ ಪುರಂಧಿಂ । ಅಗ್ನಿಗ್ಂ ಸ್ವಿಷ್ಟಕೃತಮಾಹುವೇಮ । ಸ್ವಿಷ್ಟಮಗ್ನೇ ಅಭಿತತ್ಪೃಣಾಹಿ । ವಿಶ್ವಾದೇವ ಪೃತನಾ ಅಭಿಷ್ಯ । ಉರುಂ ನಃ ಪಂಥಾಂ ಪದಿಶನ್ವಿಭಾಹಿ । ಜ್ಯೋತಿಷ್ಮದ್ದೇಹ್ಯಜರಂ ನ ಆಯುಸ್ಸ್ವಾಹಾ ॥

**ಅಗ್ನಯೇ ಸ್ವಿಷ್ಟಕೃತ ಇದಂ ನಮಮ ॥**

**ಜಯಾದಿ ಹೋಮಃ :-**

**53. ಏತತ್ಕರ್ಮ ಸಮೃದ್ಧ್ಯರ್ಥಂ ಸ್ರುವೇಣ ಜಯಾದಿ ಹೋಮಂ ಕರಿಷ್ಯೇ ॥**

53. 1) ಚಿತ್ತಂ ಚ ಸ್ವಾಹಾ ॥

51. ಇದನ್ನು ಚರುಹೋಮದಲ್ಲಿ ಮಾಡಬೇಕು. ಸೃಕ್ಕಿಗೆ ಚರುವನ್ನು ಸ್ವಲ್ಪ ಹಾಕಿಕೊಂಡು ಸ್ರುವದಿಂದ ಅದಕ್ಕೆ 2 ಸಾರಿ ಅಭಿಘಾರ ಮಾಡಬೇಕು.

52. ನಂತರ ಈ ಮನ್ತ್ರದಿಂದ ಈ ಸ್ವಿಷ್ಟಕೃತ್ ಹೋಮವನ್ನು ಮಾಡಬೇಕು. (ಚರುವಿಲ್ಲದಿದ್ದರೆ ಸೃಕ್ಕಿಗೆ ಸ್ರುವದಿಂದ ಆಜ್ಯವನ್ನು ಹಾಕಿಕೊಂಡು ಹೋಮವನ್ನು ಸೃಕ್ಕಿನಿಂದ ಮಾಡಬೇಕು)

## ಜಯಾದಿ ಹೋಮಃ :-

53. ಕರ್ಮಫಲ ಸಮೃದ್ಧಿಗಾಗಿ ಜಯಾದಿ ಹೋಮಗಳನ್ನು (ಆಜ್ಯಮಾತ್ರ) ಸ್ರುವದಿಂದ ಮಾಡಬೇಕು.

53. 1) ಚಿತ್ತಾಯೇದಂ ನಮಮ ॥

53. 2) ಚಿತ್ತಿಶ್ಚ ಸ್ವಾಹಾ ॥

53. 3) ಆಕೂತಂ ಚ ಸ್ವಾಹಾ ॥

53. 4) ಆಕೂತಿಶ್ಚ ಸ್ವಾಹಾ ॥

53. 5) ವಿಜ್ಞಾತಂ ಚ ಸ್ವಾಹಾ ॥

53. 6) ವಿಜ್ಞಾನಂ ಚ ಸ್ವಾಹಾ ॥

53. 7) ಮನಶ್ಚ ಸ್ವಾಹಾ ॥

53. 8) ಶಕ್ವರೀಶ್ಚ ಸ್ವಾಹಾ ॥

53. 9) ದರ್ಶಶ್ಚ ಸ್ವಾಹಾ ॥

53. 10) ಪೂರ್ಣಮಾಸಶ್ಚ ಸ್ವಾಹಾ ॥

53. 11) ಬೃಹಚ್ಚ ಸ್ವಾಹಾ ॥





53. 2) ಚಿತ್ಯಾ ಇದಂ ನಮಮ ॥

53. 3) ಆಕೂತಾಯೇದಂ ನಮಮ ॥

53. 4) ಆಕೂತ್ಯಾಯೇದಂ ನಮಮ ॥

53. 5) ವಿಜ್ಞಾತಾಯೇದಂ ನಮಮ ॥

53. 6) ವಿಜ್ಞಾನಾಯೇದಂ ನಮಮ ॥

53. 7) ಮನಸ ಇದಂ ನಮಮ ॥

53. 8) ಶಕ್ವರೀಭ್ಯ ಇದಂ ನಮಮ ॥

53. 9) ದರ್ಶಾಯೇದಂ ನಮಮ ॥

53. 10) ಪೂರ್ಣಮಾಸಾಯೇದಂ ನಮಮ ॥

53. 11) ಬೃಹತ ಇದಂ ನಮಮ ॥

53. 12) ರಥಂತರಂ ಚ ಸ್ವಾಹಾ ॥

53. 13) ಪ್ರಜಾಪತಿರ್ಜಯಾನಿಂದ್ರಾಯ ವೃಷ್ಣೇ ಪ್ರಾಯಚ್ಛದುಗ್ರಃ ಪೃತನಾಜ್ಯೇಷು । ತಸ್ಮೈ ವಿಶಸ್ಸಮನಮಂತ ಸರ್ವಾಸ್ಸ ಉಗ್ರಸ್ಸಹಿ ಹವ್ಯೋ ಬಭೂವ ಸ್ವಾಹಾ ॥

53. 14) ಅಗ್ನಿರ್ಭೂತಾನಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 15) ಇಂದ್ರೋ ಜ್ಯೇಷ್ಠಾನಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 12) ರಥಂತರಾಯೇದಂ ನಮಮ ।

53. 13) ಪ್ರಜಾಪತಯ ಇದಂ ನಮಮ ।

53. 14) ಅಗ್ನಯೇ ಭೂತಾನಾಮಧಿಪತಯ ಇದಂ ನಮಮ ।

15. ಇಂದ್ರಾಯಜ್ಯೇಷ್ಠಾನಾಮಧಿಪತಯ ಇದಂ ನಮಮ ।

53. 16) ಯಮಃ ಪೃಥಿವ್ಯಾಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 17) ವಾಯುರಂತರಿಕ್ಷಸ್ಯಾಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 18) ಸೂರ್ಯೋ ದಿವೋಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 19) ಚಂದ್ರಮಾ ನಕ್ಷತ್ರಾಣಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ
ಪುರೋಧಾಯಾಮಸ್ಮಿನ್ ಕರ್ಮನ್ನಸ್ಯಾಂ
ದೇವಹೂತ್ಯಾಗ್ಂ ಸ್ವಾಹಾ ॥

16. ಯಮಾಯ ಪೃಥಿವ್ಯಾಧಿಪತಯ ಇದಂ ನಮಮ ।

17. ವಾಯವೇ ಅಂತರಿಕ್ಷಸ್ಯಾಧಿಪತಯ ಇದಂ ನಮಮ ।

53. 18) ಸೂರ್ಯಾಯ ದಿವೋಧಿಪತಯ ಇದಂ ನಮಮ ।

53. 19) ಚಂದ್ರಮಸೇ ನಕ್ಷತ್ರಾಣಾಮಧಿಪತಯ ಇದಂ ನಮಮ ।

53. 20) ಬೃಹಸ್ಪತಿರ್ಬ್ರಹ್ಮಣೋಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 21) ಮಿತ್ರಸ್ಸತ್ಯಾನಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 22) ವರುಣೋಪಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 23) ಸಮುದ್ರಸ್ಸ್ರೋತ್ಯಾನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 20) ಬೃಹಸ್ಪತಯೇ ಬ್ರಹ್ಮಣೋऽಧಿಪತಯ ಇದಂ ನಮಮ ।

53. 21) ಮಿತ್ರಾಯ ಸತ್ಯಾನಾಮಧಿಪತಯ ಇದಂ ನಮಮ ।

53. 22) ವರುಣೋಽಪಾಮಧಿಪತಯ ಇದಂ ನಮಮ ।

53. 23) ಸಮುದ್ರಾಯ ಸ್ರೋತ್ಯಾನಾಮಧಿಪತಯ ಇದಂ ನಮಮ ।

53. 24) ಅನ್ನಗ್ಂ ಸಾಮ್ರಾಜ್ಯಾನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 25) ಸೋಮ ಓಷಧೀನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 26) ಸವಿತಾ ಪ್ರಸವಾನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 24) ಅನ್ನಾಯ ಸಾಮ್ರಾಜ್ಯಾನಾಮಧಿಪತಿಯ ಇದಂ ನಮಮ ।

53. 25) ಸೋಮಾಯೌಷಧೀನಾಮಧಿಪತಯ ಇದಂ ನಮಮ ।

53. 26) ಸವಿತ್ರೇ ಪ್ರಸವಾನಾಮಧಿಪತಯ ಇದಂ ನಮಮ ।

53. 27) ರುದ್ರಃ ಪಶೂನಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

**ಅಪಉಪಸ್ಪೃಶ್ಯ ॥**

53. 28) ತ್ವಷ್ಟಾರೂಪಾಣಾಮಧಿಪತಿಸ್ಸಮಾವತ್ವಸ್ಮಿನ್ ಬ್ರಹ್ಮನ್
ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾ
ಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

53. 29) ವಿಷ್ಣುಃ ಪರ್ವತಾನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 27) ರುದ್ರಾಯ ಪಶೂನಾಮಧಿಪತಯ ಇದಂ ನಮಮ ।
(ಕೈ ತೊಳೆದುಕೊಳ್ಳಬೇಕು)

53. 28) ತ್ವಷ್ಟ್ರೇ ರೂಪಾಣಾಮಧಿಪತಯ ಇದಂ ನಮಮ ।

53. 29) ವಿಷ್ಣವೇ ಪರ್ವತಾನಾಮಧಿಪತಯ ಇದಂ ನಮಮ ।

53. 30) ಮರುತೋ ಗಣಾನಾಮಧಿಪತಿಸ್ಸಮಾವತ್ವಸ್ಮಿನ್
ಬ್ರಹ್ಮನ್ ಅಸ್ಮಿನ್ ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋ
ಧಾಯಾಮಸ್ಮಿನ್ ಕರ್ಮನ್ನಸ್ಯಾಂ ದೇವಹೂತ್ಯಾಗ್ಂ
ಸ್ವಾಹಾ ॥

53. 31) ಪಿತರಃ ಪಿತಾಮಹಾಃ ಪರೇವರೇ ತತಾಸ್ತತಾಮಹಾ
ಇಹಮಾವತ್ವಸ್ಮಿನ್ ಬ್ರಹ್ಮನ್ ಅಸ್ಮಿನ್
ಕ್ಷತ್ರೇಸ್ಯಾಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್
ಕರ್ಮನ್ನಸ್ಯಾಂ ದೇವಹೂತ್ಯಾಗ್ಂ ಸ್ವಾಹಾ ॥

**ಅಪಉಪಸ್ಪೃಶ್ಯ ॥**

53. 32) ಋತಾಷಾಡೃತಧಾಮಾಗ್ನಿರ್ಗಂಧರ್ವಸ್ತಸ್ಯೌಷಧಯೋ
ಪ್ಸರಸ ಊರ್ಜೋನಾಮ ಸ ಇದಂ ಬ್ರಹ್ಮಕ್ಷತ್ರಂ ಪಾತು
ತಾ ಇದಂ ಬ್ರಹ್ಮಕ್ಷತ್ರಂ ಪಾಂತು ತಸ್ಮೈ ಸ್ವಾಹಾ ॥

53. 30) ಮರುದ್ಭ್ಯೋ ಗಣಾನಾಮಧಿಪತಿಭ್ಯ ಇದಂ ನಮಮ ।

53. 31) ಮನ್ತ್ರೋಕ್ತ ದೇವತಾಭ್ಯ ಇದಂ ನಮಮ ।

(ಕೈ ತೊಳೆದುಕೊಳ್ಳಬೇಕು)

53. 32) ಋತಾಸಾಹೇ ಋತುಧಾಮ್ನೇ ಅಗ್ನಯೇ ಗಂಧರ್ವಾಯೇದಂ ನಮಮ ।

53. 33) ತಾಭ್ಯ ಸ್ವಾಹಾ ॥

53. 34) ಸಗ್ಂಹಿತೋ ವಿಶ್ವಸಾಮಾಸೂರ್ಯೋ ಗಂಧರ್ವಸ್ತ
ಸ್ಯೌಷಧ ಯೋಪ್ಸರಸ ಊರ್ಜೋನಾಮ ಸ ಇದಂ
ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ ಪಾಂತು
ತಸ್ಮೈ ಸ್ವಾಹಾ ॥

53. 35) ತಾಭ್ಯ ಸ್ವಾಹಾ ॥

53. 36) ಸುಷುಮ್ನಸ್ಸೂರ್ಯರಶ್ಮಿಶ್ಚಂದ್ರಮಾಗಂಧರ್ವಸ್ತಸ್ಯ
ನಕ್ಷತ್ರಾಣ್ಯಪ್ಸರಸೋ ಬೇಕುರಯೋ ನಾಮಸ ಇದಂ
ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ ಪಾಂತು
ತಸ್ಮೈ ಸ್ವಾಹಾ ॥

53. 37) ತಾಭ್ಯ ಸ್ವಾಹಾ ॥

53. 33) ಓಷಧೀಭ್ಯೋಽಪ್ಸರೋಭ್ಯ ಊರ್ಗ್ಭ್ಯ ಇದಂ ನಮಮ ।

53. 34) ಸಗ್ಂಹಿತಾಯ ವಿಶ್ವಸಾಮ್ನೇ ಸೂರ್ಯಾಯ ಗಂಧರ್ವಾಯೇದಂ ನಮಮ ।

53. 35) ಮರೀಚಿಭ್ಯೋಽಪ್ಸರೋಭ್ಯಃ ಆಯುಭ್ಯಃ ಇದಂ ನಮಮ ।

53. 36) ಸುಷುಮ್ನಾಯ ಸೂರ್ಯರಶ್ಮಯೇ ಚಂದ್ರಮಸೇ ಗಂಧರ್ವಾಯೇದಂ ನಮಮ ।

53. 37) ನಕ್ಷತ್ರೇಭ್ಯೋಽಪ್ಸರೋಭ್ಯ ಬೇಕುರಿಭ್ಯ ಇದಂ ನಮಮ ।

53. 38) ಭುಜ್ಯುಸ್ಸುಪರ್ಣೋ ಯಜ್ಞೋಗಂಧರ್ವಸ್ತಸ್ಯ ದಕ್ಷಿಣಾ
ಅಪ್ಸರಸಸ್ತವಾನಾಮಸ ಇದಂ ಬ್ರಹ್ಮಕ್ಷತ್ರಂ ಪಾತು ತಾ
ಇದಂ ಬ್ರಹ್ಮಕ್ಷತ್ರಂ ಪಾಂತು ತಸ್ಮೈ ಸ್ವಾಹಾ ॥

53. 39) ತಾಭ್ಯ ಸ್ವಾಹಾ ॥

53. 40) ಪ್ರಜಾಪತಿರ್ವಿಶ್ವ ಕರ್ಮಾಮನೋ ಗಂಧರ್ವಸ್ತಸ್ಯ
ಕ್ಸ್ಸಾಮಾ ನ್ಯಪ್ಸರಸೋ ವಹ್ನಯೋ ನಾಮಸ ಇದಂ
ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ ಪಾಂತು
ತಸ್ಮೈ ಸ್ವಾಹಾ ॥

53. 41) ತಾಭ್ಯ ಸ್ವಾಹಾ ॥

53. 42) ಇಷಿರೋವಿಶ್ವವ್ಯಚಾವಾತೋ ಗಂಧರ್ವಸ್ತಸ್ಯಾಪೋಽಪ್ಸರ
ಸೋಮುದಾನಾಮಸ ಇದಂ ಬ್ರಹ್ಮಕ್ಷತ್ರಂ ಪಾತು ತಾ
ಇದಂ ಬ್ರಹ್ಮಕ್ಷತ್ರಂ ಪಾಂತು ತಸ್ಮೈ ಸ್ವಾಹಾ ॥

53. 38) ಭುಜ್ಯವೇ ಸುಪರ್ಣಾಯ ಯಜ್ಞಾಯ ಗಂಧರ್ವಾಯೇದಂ ನಮಮ ।

53. 39) ದಕ್ಷಿಣಾಭ್ಯೋಽಪ್ಸರೋಭ್ಯಸ್ತ್ವಾಭ್ಯ ಇದಂ ನಮಮ ।

53. 40) ಪ್ರಜಾಪತಯೇ ವಿಶ್ವಕರ್ಮಣೇ ಮನಸೇ ಗಂಧರ್ವಾಯೇದಂ ನಮಮ ।

53. 41) ಋಕ್ಸಾಮೇಭ್ಯೋಽಪ್ಸರೋಭ್ಯಃ ವಹ್ನಿಭ್ಯ ಇದಂ ನಮಮ ।

53. 42) ಇಷಿರಾಯ ವಿಶ್ವವ್ಯಚ ಸೇವಾತಾಯ ಗಂಧರ್ವಾಯೇದಂ ನಮಮ ।

53. 43) ತಾಭ್ಯ ಸ್ವಾಹಾ ॥

53. 44) ಭುವನಸ್ಯ ಪತೇಯಸ್ಯತ ಉಪರಿಗೃಹಾ ಇಹ ಚ ।
ಸನೋರಾಸ್ವಾಜ್ಯಾನಿಗ್ಂ ರಾಯಸ್ಪೋಷಗ್ಂ
ಸುವೀರ್ಯಗ್ಂ ಸಂವತ್ಸರೀಣಾಗ್ಂ ಸ್ವಸ್ತಿಗ್ಂ ಸ್ವಾಹಾ ॥

53. 45) ಪರಮೇಷ್ಠ್ಯಧಿಪತಿರ್ಮೃತ್ಯುರ್ಗಂಧರ್ವಸ್ತಸ್ಯ ವಿಶ್ವಮಪ್ಸರ
ಸೋಭುವೋ ನಾಮಸ ಇದಂ ಬ್ರಹ್ಮಕ್ಷತ್ರಂ ಪಾತು ತಾ
ಇದಂ ಬ್ರಹ್ಮಕ್ಷತ್ರಂ ಪಾಂತು ತಸ್ಮೈ ಸ್ವಾಹಾ ॥

53. 46) ತಾಭ್ಯ ಸ್ವಾಹಾ ॥

53. 47) ಸುಕ್ಷಿತಿಸ್ಸುಭೂತಿರ್ಭದ್ರ ಕೃತ್ತುಸ್ಸುವರ್ವಾನ್ಪರ್ಜನ್ಯೋ
ಗಂಧರ್ವಸ್ತಸ್ಯವಿದ್ಯುತೋಽಪ್ಸರಸೋ ಋಚೋ ನಾಮಸ
ಇದಂ ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ
ಪಾಂತು ತಸ್ಮೈ ಸ್ವಾಹಾ ॥

53. 43) ಅದ್ಭ್ಯೋಽಪ್ಸರೋಭ್ಯಃಮುದಾಭ್ಯ ಇದಂ ನಮಮ ।

53. 44) ಭುವನಸ್ಯಪತ್ಯೈ ಇದಂ ನಮಮ ।

53. 45) ಪರಮೇಷ್ಠಿನೇಽಧಿಪತಯೇ ಮೃತ್ಯವೇ ಗಂಧರ್ವಾಯೇದಂ ನಮಮ ।

53. 46) ವಿಶ್ವಸ್ಮಾಭ್ಯೋಽಪ್ಸರೂಭ್ಯಃ ಭೂಭ್ಯ ಇದಂ ನಮಮ ।

53. 47) ಸುಕ್ಷಿತಯೇ ಸುಭೂತಯೇ ಭದ್ರಕೃತೇ ಸುವರ್ವತೇ ಪರ್ಜನ್ಯಾಯ ಗಂಧರ್ವಾ ಇದಂ ನಮಮ ।

53. 48) ತಾಭ್ಯ ಸ್ವಾಹಾ ॥

53. 49) ದೂರೇಹೇತಿರಮೃಡಯೋ ಮೃತ್ಯುರ್ಗಂಧರ್ವಸ್ತಸ್ಯ
ಪ್ರಜಾ ಅಪ್ಸರಸೋಭಿರುವ್ರೋ ನಾಮಸ ಇದಂ
ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ ಪಾಂತು
ತಸ್ಮೈ ಸ್ವಾಹಾ ॥

53. 50) ತಾಭ್ಯ ಸ್ವಾಹಾ ॥

53. 51) ಚಾರುಃ ಕೃಪಣಕಾಶೀ ಕಾಮೋ ಗಂಧರ್ವಸ್ತಸ್ಯಾಧ
ಯೋಪ್ಸರ ಸಶ್ಯೋಚಯಂತೀರ್ನಾಮಸ ಇದಂ
ಬ್ರಹ್ಮಕ್ಷತ್ರಂ ಪಾತು ತಾ ಇದಂ ಬ್ರಹ್ಮಕ್ಷತ್ರಂ ಪಾಂತು
ತಸ್ಮೈ ಸ್ವಾಹಾ ॥

53. 52) ತಾಭ್ಯ ಸ್ವಾಹಾ ॥

53. 48) ವಿದ್ಯುದ್ಭ್ಯೋಽಪ್ಸರೋಭ್ಯಃ ಋಗ್ಭ್ಯ ಇದಂ ನಮಮ ।

53. 49) ದೂರೇಹೇತಯೇ ಅಮೃಡಯಾಯ ಮೃತ್ಯವೇ ಗಂಧರ್ವಾಯೇದಂ ನಮಮ ।

53. 50) ಪ್ರಜಾಭ್ಯೋಽಪ್ಸರೋಭ್ಯಃ ಭೀರುಭ್ಯ ಇದಂ ನಮಮ ।

53. 51) ಚಾರವೇ ಕೃಪಣ ಕಾಶಿನೇ ಕಾಮಾಯ ಗಂಧರ್ವಾಯೇದಂ ನಮಮ ।

53. 52) ಆಧಿಭ್ಯೋಽಪ್ಸರೋಭ್ಯತ್ಶೋಚಯಂತೀಭ್ಯ ಇದಂ ನಮಮ ।

53. 53) ಸನೋಭುವನಸ್ಯಪತೇ ಯಸ್ಯತ ಉಪರಿಗೃಹಾ ಇಹ ಚ । ಉರುಬ್ರಹ್ಮಣೇಸ್ಮೈಕ್ಷತ್ರಾಯ ಮಹಿಶರ್ಮ ಯಚ್ಛಸ್ವಾಹಾ ॥

53. 54) ಪ್ರಜಾಪತೇನತ್ವದೇತಾನ್ಯನ್ಯೋ ವಿಶ್ವಾಜಾತಾನಿಪರಿತಾ ಬಭೂವ । ಯತ್ಕಾಮಸ್ತೇ ಜುಹುಮಸ್ತಂ ನೋ ಅಸ್ತು ವಯಗ್ಂಸ್ಯಾಮ ಪತಯೋರಯೀಣಾಗ್ಂ ಸ್ವಾಹಾ ॥

**(ಪ್ರಜಾಪತಿಂ ಮನಸಾಧ್ಯಾಯನ್)**

53. 55) ಭೂಃ ಸ್ವಾಹಾ ॥

53. 56) ಭುವಃ ಸ್ವಾಹಾ ॥

53. 57) ಸುವಃ ಸ್ವಾಹಾ ॥

53. 53) ಸನೋಽಭುವನಸ್ಯ ಪತ್ನೈ ಬ್ರಹ್ಮಣ ಇದಂ ನಮಮ ।

53. 54) ಪ್ರಜಾಪತಯ ಇದಂ ನಮಮ ।
(ಈ ಮನ್ತ್ರವನ್ನು ಮನಸ್ಸಿನಲ್ಲಿ ಹೇಳಿಕೊಳ್ಳಬೇಕು)

53. 55) ಅಗ್ನಯ ಇದಂ ನಮಮ ।

53. 56) ವಾಯವ ಇದಂ ನಮಮ ।

53. 57) ಸೂರ್ಯಾಯೇದಂ ನಮಮ ।

54. ಆಜ್ಯ ಸ್ವಿಷ್ಟಕೃತಃ ।

ಯದಸ್ಯ ಕರ್ಮಣೋತ್ಯರೀರಿಚಂ ಯದ್ವಾನ್ಯೂನಮಿಹಾಕರಂ ।

ಅಗ್ನಿಷ್ಟತ್ಸ್ವಿಷ್ಟ ಕೃದ್ವಿದ್ವಾನ್ತ್ಸರ್ವಗ್‌ಂ ಸ್ವಿಷ್ಟಗ್‌ಂ ಸುಹುತಂ

ಕರೋತು ಸ್ವಾಹಾ ॥

55. (ತತೋಽಗ್ನೇರುತ್ತರತಸ್ಥಿತಮಿಧ್ಮ ಬಂಧನ ರಜ್ಜುಂ ವಿಸ್ರಸ್ಯ)

ಸ್ವಾಹಾ ॥

56. ಅಪಉಪಸ್ಪೃಶ್ಯ ॥

57. (ಲೇಪ ಕಾರ್ಯಂ ಕುರ್ಯಾತ್)

ಅಗ್ರಂ - ಮಧ್ಯಂ - ಮೂಲಂ

ಏತತ್ ಏತತ್ ನಿರ್ದೇಶನಂ ಚ ।

ಅಗ್ನಿಂ ಅಭಿಮಂತ್ರಣಂ ಚ ।

ಭೂಮೌ ನಿರ್ಮಾರ್ಷ್ಟಿಃ ॥

54. (ಇದು ಆಜ್ಯ ಸ್ವಿಷ್ಟಕೃತ್ ಹೋಮ. ಈ ಮನ್ತ್ರದಿಂದ ಸ್ರುವದಿಂದ ಆಜ್ಯವನ್ನು ಹೋಮ ಮಾಡಬೇಕು)

ಅಗ್ನಯೇ ಸ್ವಿಷ್ಟಕೃತಂ ಇದಂ ನಮಮ ॥

55. (ಅಗ್ನಿಗೆ ಉತ್ತರದಲ್ಲಿ ಸಮಿತ್ತಿಗೆ ಕಟ್ಟಿರುವ ರಜ್ಜುವಿನ ಗಂಟನ್ನು ಬಿಚ್ಚಿ, ರಜ್ಜುವನ್ನು ತುಪ್ಪದಲ್ಲಿ ಅದ್ದಿ ಹೋಮ ಮಾಡಬೇಕು)

ರುದ್ರಾಯ ತಂತುಚರಾಯೇದಂ ನಮಮ

56. ಕೈ ತೊಳೆದುಕೊಳ್ಳಬೇಕು.

57. (ಲೇಪಕಾರ್ಯವನ್ನು ಮಾಡಬೇಕು)

ಪಾತ್ರಾಸಾಧನಗಳ ಕೆಳಗೆ ಹಾಸಲು ಉಪಯೋಗಿಸಿದ ದರ್ಭೆಗಳನ್ನು ಉತ್ತರಾಗ್ರವಾಗಿ ಮೂಲವನ್ನು ಬಿಟ್ಟು ಬಲ ಅಧೋಮುಷ್ಟಿಯಲ್ಲಿಯೂ, ಅಗ್ರವನ್ನು ಬಿಟ್ಟು ಎಡ ಊರ್ಧ್ವ ಮುಷ್ಟಿಯಲ್ಲಿಯೂ ಹಿಡಿಯಬೇಕು.

ದರ್ಭೆಯ ಅಗ್ರವನ್ನು ಸ್ರಕ್ಕಿನಲ್ಲಿಯೂ ಮಧ್ಯವನ್ನು ಸ್ರುವದಲ್ಲಿಯೂ, ಮೂಲವನ್ನು ಆಜ್ಯಪಾತ್ರೆಯಲ್ಲಿಯೂ ಅದ್ದಿ ಒಂದು ದರ್ಭೆಯನ್ನು ಪ್ರತ್ಯೇಕವಾಗಿ ಇಟ್ಟು, ಮಿಕ್ಕ ದರ್ಭೆಗಳನ್ನು ಸ್ರಕ್ಕಿಗೆ ಸ್ಪರ್ಶಿಸಿ ಬಲಕೈಯಲ್ಲಿ ಅಗ್ರ - ಮಧ್ಯ - ಮೂಲಗಳು ಸುಡುವಂತೆ ಹೋಮ ಮಾಡಬೇಕು.

ಉಳಿದ ಒಂದು ದರ್ಭೆಯನ್ನು ಕೈಯಲ್ಲಿ ಹಿಡಿದು ಮೂರು ಸಲ ಮೇಲೆತ್ತಿ ಅದೂ ಸಹ ಅಗ್ರ - ಮಧ್ಯ - ಮೂಲಗಳು ಸುಡುವಂತೆ ಹೋಮ ಮಾಡಬೇಕು.

ಅಗ್ನಿಗೆ ಮೂರು ಸಲ (3) ತರ್ಜನಿಯಿಂದ ನಿರ್ದೇಶನವನ್ನು ಮಾಡಿ ಅಗ್ನಿಯನ್ನು ಅಭಿವಂದಿಸಿ ಭೂಮಿಯನ್ನು ತರ್ಜನಿಯಿಂದ ಉಜ್ಜಿ ನಂತರ ಪರಿಧಿಗಳನ್ನು ಹೋಮ ಮಾಡಬೇಕು.

58. ಮಧ್ಯಮ ಪರಿದಿಂ ಪ್ರಹೃತ್ಯ । ಇತರೌ ಪ್ರಹರನ್ । ಆಘಾರ ಸಮಿಧೌ ಪ್ರಹೃತ್ಯ ॥

59. (ವಿಶ್ವಾನ್ ದೇವಾನುದ್ದಿಶ್ಯಸಗ್ಗ್ಂ ಸ್ರುವೇಣಾಭಿಜುಹೋತಿ) ವಸುಭ್ಯೋ ರುದ್ರೇಭ್ಯಃ ಆದಿತ್ಯೋಭ್ಯಸ್ಸಗ್ಂ ಸ್ರಾವೇಭ್ಯ ಇದಂ ॥

60. ಅವಿಜ್ಞಾತಾದಿ ಪ್ರಾಯಶ್ಚಿತಾಹುತೀಃ ಸ್ರುವೇಣ ಹೋಷ್ಯಾಮಿ ॥

60. 1) ಅನಾಜ್ಞಾತಂ ಯದಾಜ್ಞಾತಂ ಯಜ್ಞಸ್ಯ ಕ್ರಿಯತೇಮಿಥು । ಅಗ್ನೇತದಸ್ಯ ಕಲ್ಪಯತ್ವಗ್ಂ ಹಿ ವೇತ್ಥಯಥಾತಥಗ್ಂ ಸ್ವಾಹಾ ॥

60. 2) ಪುರುಷ ಸಂಮಿತೋ ಯಜ್ಞಃ । ಯಜ್ಞಃ ಪುರುಷ ಸಂಮಿತಃ । ಅಗ್ನೇತದಸ್ಯ ಕಲ್ಪಯತ್ವಗ್ಂ ಹಿ ವೇತ್ಥಯಥಾತಥಗ್ಂ ಸ್ವಾಹಾ ॥

60. 3) ಯತ್ಪಾ ಕತ್ರಾಮನಸಾಧೀನದಕ್ಷಾನ ಯಜ್ಞಸ್ಯ ಮನ್ವತೇ ಮರ್ತಾಸಃ । ಅಗ್ನಿಷ್ಟದ್ಧೋತಾ

58. ಮೊದಲು ಪಶ್ಚಿಮದಲ್ಲಿರುವ ಸಮಿತ್ತನ್ನು, ನಂತರ ದಕ್ಷಿಣೋತ್ತರದಲ್ಲಿರುವ ಸಮಿತ್ತುಗಳು ಮತ್ತು ಆಘಾರ ಸಮಿತ್ತುಗಳನ್ನು, ಆಜ್ಯದಲ್ಲಿ ಅದ್ದಿ ಅಗ್ನಿಗೆ ಅರ್ಪಿಸಬೇಕು.

59. ಈ ಮಂತ್ರದಿಂದ ಸ್ರುಕ್ ಮತ್ತು ಸ್ರುವ ಎರಡರಿಂದಲೂ ಆಜ್ಯವನ್ನು ಏಕಕಾಲದಲ್ಲಿ ಹೋಮ ಮಾಡಬೇಕು.

60. ಅಜ್ಞಾನವಶದಿಂದಾದ ತಪ್ಪಿಗಾಗಿ ಪ್ರಾಯಶ್ಚಿತ್ತ ಹೋಮಗಳನ್ನು ಸ್ರುವದಿಂದ ಮಾಡಬೇಕು.

60. 1) ಅಗ್ನಯ ಇದಂ ನಮಮ ।

60. 2) ಅಗ್ನಯ ಇದಂ ನಮಮ ।

60. 3) ಅಗ್ನಯ ಇದಂ ನಮಮ ।

ಕ್ರತುವಿದ್ವಿಜಾನನ್ ಯಜಿಷ್ಠೋ ದೇವಾಗ್ಂ

ಋತು ಶೋಯಜಾತಿ ಸ್ವಾಹಾ ॥

60. 4) ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ

ಹೇಡೋऽವಯಾಸಿಸೀಷ್ಠಾಃ । ಯಜಿಷ್ಠೋ

ವಹ್ನಿತಮಶ್ಶೋಶುಚಾನೋ ವಿಶ್ವಾನ್ ದ್ವೇಷಾಗ್ಂಸಿ

ಪ್ರಮುಮುಗ್ಧ್ಯಸ್ಮತ್ಸ್ವಾಹಾ ॥

60. 5) ಸತ್ವಂ ನೋ ಅಗ್ನೇऽವಮೋ ಭವೋತಿನೇದಿಷ್ಠೋ ಅಸ್ಯಾ

ಉಷಸೋವ್ಯುಷ್ಟೌ । ಅವಯಕ್ಷ್ವನೋ ವರುಣಗ್ಂ

ರರಾಣೋವೀಹಿ ಮೃಡೀಕಗ್ಂ ಸುಹವೋನ ಏಧಿ

ಸ್ವಾಹಾ ॥

60. 6) ಆಭಿರ್ಗೀರ್ಭಿರ್ಯದತೋನ ಊನಮಾಪ್ಯಾಯ

ಹರಿವೋ ವರ್ಧಮಾನಃ । ಯದಾ ಸ್ತೋತೃಭ್ಯೋ ಮಹಿ

60. 4) ಅಗ್ನಿವರುಣಾಭ್ಯಾಂ ಇದಂ ನಮಮ ।

60. 5) ಅಗ್ನಿವರುಣಾಭ್ಯಾಂ ಇದಂ ನಮಮ ।

60. 6) ಇಂದ್ರಾಯ ಹರಿವತೇ ವರ್ಧಮಾನಾಯೇದಂ ನಮಮ ।

ಗೋತ್ರಾ ರುಜಾಸಿ ಭೂಯಿಷ್ಠ ಭಾಜೋ ಅಧತೇಸ್ಯಾಮ

ಸ್ವಾಹಾ ॥

60. 7) ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ ।

ಸಮೂಡಮಸ್ಯ ಪಾಗ್ಂ ಸುರೇ ಸ್ವಾಹಾ ॥

60. 8) ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।

ಉರ್ವಾರುಕಮಿವ ಬಂಧನಾನ್ ಮೃತ್ಯೋರ್ಮುಕ್ಷೀಯ

ಮಾಮೃತಾತ್ ಸ್ವಾಹಾ ॥

60. 9) ಯದ್ವಿದ್ವಾಗ್ಂ ಸೋಯದವಿದ್ವಾಗ್ಂ ಸೋಮುಗ್ಧಾಃ

ಕುರ್ವಂತಿ ಋತ್ವಿಜಃ । ಅಗ್ನಿರ್ಮಾತಸ್ಮಾದೇನಸಃ ಶ್ರದ್ಧಾ

ದೇವೀ ಚ ಮುಂಚತಾಗ್ಂ ಸ್ವಾಹಾ ॥

60. 10) ಅಸ್ಕಾಂದ್ಯೌಃ ಪೃಥಿವೀಂ । ಅಸ್ಕಾನ್ನೃಷಭೋ ಯುವಾಗಾಃ ।

ಸ್ಕನ್ನೇಮಾ ವಿಶ್ವಾಭುವನಾ । ಸ್ಕನ್ನೋಯಜ್ಞಃ

60. 7) ವಿಷ್ಣವ ಇದಂ ನಮಮ ।

60. 8) ತ್ರ್ಯಂಬಕ ರುದ್ರಾಯೇದಂ ನಮಮ ।

60. 9) ಅಗ್ನಿಶ್ರದ್ಧಾಭ್ಯಾಯಿದಂ ನಮಮ ।

60. 10) ಸ್ಕನ್ನಾದಿಭ್ಯೋದೇವತಾಭ್ಯಾಯೇದಂ ನಮಮ ।

ಪ್ರಜನಯತು । ಅಸ್ಕಾನಜನಿ ಪ್ರಾಜನಿ । ಅಸ್ಕನ್ನಾಜ್ಜಾಯ

ತೇ ವೃಷಾ । ಸ್ಕನ್ನಾತ್ಪ್ರಜನಿಷೀ ಮಹಿ ಸ್ವಾಹಾ ॥

60. 11) ಯನ್ಮ ಆತ್ಮನೋಮಿಂದಾ ಭೂದಗ್ನಿಸ್ತತ್ಪುನರಾಹಾ

ಜ್ಜಾತವೇದಾ ವಿಚರ್‌ಷಣಿ ಸ್ವಾಹಾ ॥

60. 12) ಪುನರಗ್ನಿಶ್ಚಕ್ಷುರದಾತ್ಪುನರಿಂದ್ರೋ ಬೃಹಸ್ಪತಿಃ ।

ಪುನರ್ಮೇ ಅಶ್ವಿನಾಯುವಂ ಚಕ್ಷುರಾಧತ್ತಮಕ್ಷ್ಯೋ

ಸ್ವಾಹಾ ॥

60. 13) ಪುನಸ್ತ್ವಾದಿತ್ಯಾ ರುದ್ರಾ ವಸವಸ್ಸಮಿಂಧತಾಂ

ಪುನರ್ಬ್ರಹ್ಮಾಣೋ ವಸುನೀತ ಯಜ್ಞೈಃ । ಘೃತೇನ ತ್ವಂ

ತನುವೋ ವರ್ಧಯಸ್ವ ಸತ್ಯಾಸ್ಸಂತು ಯಜಮಾನಸ್ಯ

ಕಾಮಾ ಸ್ವಾಹಾ ॥

60. 11) ಮಿಂದಾದಿಭ್ಯೋದೇವತಾಭ್ಯ ಇದಂ ನಮಮ ।

60. 12) ಅಗ್ನೀಂದ್ರ ಬೃಹಸ್ಪತ್ಯಶ್ವಿಭ್ಯ ಇದಂ ನಮಮ ।

60. 13) ಅಗ್ನಯೇ ವಸುನೀತಾಯೇದಂ ನಮಮ ।

60. 14) ಅಸ್ಮಿನ್ ಹೋಮ ಕರ್ಮಣಿ ಮಧ್ಯೇ ಸಂಭಾವಿತ ಸಮಸ್ತ ದೋಷ ಪ್ರಾಯಶ್ಚಿತ್ತಾರ್ಥಂ ಸರ್ವ ಪ್ರಾಯಶ್ಚಿತ್ತಂ ಹೋಷ್ಯಾಮಿ ॥

(ಅ)ಓಂ ಭೂಃ ಸ್ವಾಹಾ ॥

(ಆ) ಓಂ ಭುವಃ ಸ್ವಾಹಾ ॥

(ಇ) ಓಂ ಸುವಃ ಸ್ವಾಹಾ ॥

(ಈ) ಓಂ ಭೂರ್ಭುವಸ್ಸುವಃ ಸ್ವಾಹಾ ॥

(ಅಪ ಉಪಸ್ಪೃಶ್ಯ)

61. **ಅಥ ಪೂರ್ಣಾಹುತಿಃ :-**

ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಗ್ಂ ಹಸಃ ಸ್ವಾಹಾ ॥

62. **ವಸೋರ್ಧಾರಾ :-**

ಓಂ ಸಮುದ್ರಾದೂರ್ಮಿರ್ಧುಮಾ ಉದಾರದುಪಾಂಶುನಾ
ಸಮಮೃತತ್ವಮಾನಟ್ । ಘೃತಸ್ಯನಾಮಗುಹ್ಯಂ ಯದಸ್ತಿ

